ಗರಗದ

# ಶ್ರೀ ಮಡಿವಾಳಪ್ಪನವರ

# ಚರಿತ್ರ.



ಬೆಲೆ ೭ ಆಣೆ.

ಗದಗದ

# ಶ್ರೀ ಮಡಿವಾಳಪ್ಪನವರ

# ಚರಿತ್ರ




ಲೇಖಕ ಮತ್ತು ಪ್ರಕಾಶಕ

ರಾಮಚಂದ್ರ, ತ್ರ್ಯಂಬಕ ಕರ್ಪೂರ,

ಮ್ಯಾನೇಜರ ಸ. ಚ. ಆನಂದವನ





(ಮೂರನೆಯ ಆವೃತ್ತಿ)





೧೯೨೨

---

ಬೆಲೆ ೬ ಆಣೆ.

# ಪ್ರಸ್ತಾವನೆ.

ಈ ದೊಡ್ಡ ಸತ್ಪುರುಷರ ಸಂಕ್ಷಿಪ್ತ ಚರಿತ್ರವು ಹಿಂದಕ್ಕೆ ನಮ್ಮ ಚಂದ್ರಿಕೆಯಲ್ಲಿ ಪ್ರಸಿದ್ಧವಾದದ್ದನ್ನು ಬಹು ಜನ ವಾಚಕರು ನೆನಪಿಟ್ಟಿರಬಹುದು; ಆದರೆ ಈಗಿನಷ್ಟು ಸಂಗತಿಗಳು ಆಗ ಉಪಲಬ್ಧವಾಗದೆ ಇದ್ದದರಿಂದ ಸಿಕ್ಕಷ್ಟೇ ಪ್ರಸಿದ್ಧಿಸಲ್ಪಟ್ಟಿತು. ಇತ್ತಿತ್ತಲಾಗಿ ನಾವು ಒಂದೆರಡು ಸಾರೆ ಗರಗಕ್ಕೆ ಹೋಗಿ, ಮಡಿವಾಳಪ್ಪನವರ ಸಮಾಧಿಯನ್ನೂ ಮಠವನ್ನೂ ಕಣ್ಮುಟ್ಟ ನೋಡಿದ ಬಳಿಕ ಆ ಮಹಾತ್ಮರ ವಿಸ್ತೃತ ಚರಿತ್ರವನ್ನು ಬರೆಯಬೇಕೆಂಬ ಅತ್ಯುತ್ಕಟ ಭಕ್ತಿಯು ನಮ್ಮಲ್ಲಿ ಉತ್ಪನ್ನವಾಯಿತು. ನಮ್ಮ ಆ ಭಕ್ತಿಗೆ ಗರಗದ ಸದ್ಭಕ್ತರು ಅನುಕೂಲಮಾಡಿ ಕೊಟ್ಟದ್ದರಿಂದ ಪ್ರಸ್ತುತದ ಚರಿತ್ರ ಪುಸ್ತಕವು ಬರೆದು ಸಿದ್ಧವಾಯಿತು. ನಮ್ಮ ಕನ್ನಡವಾಚಕರಿಗೆ ವಿಶೇಷವಾಗಿ ಮಡಿವಾಳಸ್ವಾಮಿಯ ಭಕ್ತರಿಗೆ ಈ ಅಲಭ್ಯಲಾಭವನ್ನು ಒದಗಿಸಿ ಕೊಟ್ಟ ಶ್ರೇಯಸ್ಸಿನ ಬಹು ದೊಡ್ಡ ಭಾಗವು ಗರಗದ ಸದ್ಭಕ್ತರನ್ನು ಕೂಡಿಕೊಳ್ಳುವದೆಂದು ನಾವು ಪ್ರಾಂಜಲ ಮನಸ್ಸಿನಿಂದ ತಿಳಿಸದೆ ಇರಲಾರೆವು.

ಮಡಿವಾಳಪ್ಪನವರ ಅವತಾರ ಸಮಾಪ್ತವಾಗಿ ಇಂದಿಗೆ ಮೂವತ್ತೆಂಟು ವರ್ಷಗಳಾಗುತ್ತ ಬಂದಿದ್ದರೂ ಅವರ ಚರಿತ್ರವು ಪುಸ್ತಕ ರೂಪದಿಂದ ಪ್ರಸಿದ್ಧವಾಗದೆ ಇದ್ದದ್ದು ಅತ್ಯಂತ ಶೋಚನೀಯವಾದ ಸಂಗತಿಯು! ಇದರಂತೆ ನಮ್ಮ ಕರ್ನಾಟಕದಲ್ಲಿ ಹಲವು ಜನ ಸತ್ಪುರುಷರು ಆಗಿ ಹೋದರು. ಅವರೆಲ್ಲರ ಚರಿತ್ರಗಳೂ ಪ್ರಸಿದ್ಧವಾಗದೆ ಇದ್ದದ್ದರಿಂದ ನಮ್ಮ ಕರ್ನಾಟಕದಲ್ಲಿ ಹಿಂದಕ್ಕೆ ಯಾರಾದರೂ ಸತ್ಪುರುಷರು ಆಗಿರುವರೋ ಇಲ್ಲವೋ ಎಂಬ ಸಂಶಯವು ಕಾಲಾಂತರದಿಂದ ಉಂಟಾದರೂ ಉಂಟಾಗಬಹುದು! ಇದು ಕರ್ನಾಟಕಸ್ಥರಾದ ನಮಗೆ ಬಹುಲಜ್ಜಾಸ್ಪದವಾದದ್ದೆಂದು ಹೇಳಲವಶ್ಯವಿಲ್ಲ. ನಮ್ಮ ಕರ್ನಾಟಕವು ಪ್ರಸಿದ್ಧಿಗೆಬಂದು ಅದರಲ್ಲಿಯ ವ್ಯಕ್ತಿಗಳು ಕರ್ತೃತ್ವ ಶಾಲಿಗಳೂ ಸಾಹಸಿಗರೂ ಆಗ ಬೇಕಾದರೆ, ಕರ್ನಾಟಕದಲ್ಲಿ ಆಗಿ ಹೋದದೊಡ್ಡ ದೊಡ್ಡ ಸತ್ಪುರುಷರ ಹಾಗೂ ಕಡುಗಲಿಗಳ ಕಲಾಕೌಶಲ್ಯ ನಿಪುಣರ ಮತ್ತು ಬೇರೆ ಪ್ರಸಿದ್ಧಪುರುಷರ ವಿಶ್ವಸನೀಯವಾದ ಚರಿತ್ರಗಳು ಬಡ ಬಡ ಬೈಲಿಗೆ ಬೀಳಲಿಕ್ಕೆಬೇಕು. ಇತಿಹಾಸವಿಲ್ಲದ ರಾಷ್ಟ್ರವು ಉನ್ನತಿಯನ್ನು ಹೊಂದಲಾರದೆಂದು ಅನೇಕ ಪಂಡಿತರು ಕೂಡ ಅನ್ನುತ್ತಿರುವರು.

ರಾಷ್ಟ್ರೋನ್ನತಿಯ ಕಾರ್ಯಕ್ಕೆ ಸತ್ಪುರುಷರ ಹಾಗೂ ಅವರ ಚರಿತ್ರಗಳ ಅವಶ್ಯಕತೆಯು ಎಷ್ಟಿರುವದೆಂಬದನ್ನು ಎತ್ತಿ ತೋರಿಸುವ ಯೋಗ್ಯತೆಯು ನಮ್ಮ ಲೇಖನಿಕೆಯಲ್ಲಿ ಇಲ್ಲ; ದೈವೀ ಸಂಪತ್ತನ್ನು ಬೆಳೆಗೊಳಿಸಿ ವಿಶೇಷ ಸ್ಫೂರ್ತಿಯನ್ನುಂಟು ಮಾಡಬೇಕಾದರೆ ಸತ್ಪುರುಷರ ಸದುಪದೇಶದಂಥ ದಿವ್ಯ ಉಪಾಯವು ಇನ್ನೊಂದಿಲ್ಲವೆಂಬದನ್ನು ಮರಾಠಿಗರ ಸಮಗ್ರ ಇತಿಹಾಸವನ್ನೋದಿದವರು ಕಂಡು ಹಿಡಿಯದಿರಲಾರರು! ಹೀಗೆ ರಾಷ್ಟ್ರ ಜೀವನವೆನಿಸುವ ಸತ್ಪುರುಷರ ಚರಿತ್ರಗಳ ಪಾರಾಯಣವು ಮನೆ ಮನೆಯಲ್ಲಿ ಆಗ ಹತ್ತಿದರೆ ರಾಷ್ಟ್ರವೆಂಬ ಮಂದಿರಕ್ಕೆ ಹತ್ತಿದ ದುರ್ಗುಣಗಳೆಂಬ ಗೊರಲಿಯು ಸಮೂಲ ನಾಶವಾಗಿ ಹೋಗುವದೆಂಬದರಲ್ಲಿ ಸಂದೇಹವಿಲ್ಲ.

ಹೀಗೆ ಸತ್ಪುರುಷರ ಸಂಬಂಧವು ರಾಷ್ಟ್ರಕ್ಕಿರುವದರಿಂದ ನಮ್ಮ ಕನ್ನಡಿಗರಲ್ಲಿಯ ಕೊರತೆಯನ್ನು ಹೋಗಲಾಡಿಸುವದಕ್ಕಾಗಿ ನಮ್ಮ ಕರ್ನಾಟಕದಲ್ಲಿಯ ಎಲ್ಲ ಸತ್ಪುರುಷರ ಚರಿತ್ರಗಳನ್ನು ಬರೆಯಬೇಕೆಂದು ಸಂಕಲ್ಪ ಮಾಡಿದ್ದೇನೆ. ಸಂಕಲ್ಪಿಸಿದಂತೆ ಶ್ರೀ ಮುಡಿವಾಳಪ್ಪನವರ ಚರಿತ್ರವೊಂದು ಪೂರ್ಣವಾದಂತಾಯಿತು! ಇನ್ನು ಶ್ರೀ ನಾಗಲಿಂಗಪ್ಪ ಶ್ರೀ ಶರೀಫಸಾಹೇಬರು, ಶ್ರೀ ಗೋವಿಂದಭಟ್ಟರು ಮೊದಲಾದ ಸತ್ಪುರುಷರ ಚರಿತ್ರಸಂಗ್ರಹಕ್ಕೆ ಪ್ರಯತ್ನ ಮಾಡತೊಡಗುವೆವು; ಈ ಮಹರ್ಷಿಯರ ಹಾಗೂ ಬೇರೆಯಾರಾದರೂ ಕರ್ನಾಟಕಸ್ಥ ಸತ್ಪುರುಷರ ಚರಿತ್ರಗಳನ್ನು ಬಲ್ಲವರು ನಮ್ಮ ಈ ಕೆಲಸದಲ್ಲಿ ಸಹಾಯಮಾಡಬೇಕೆಂದು ವಿನಯದಿಂದ ಪ್ರಾರ್ಥಿಸಲಾಗುವದು. ಕರ್ನಾಟಕದ ಅಭಿಮಾನಿಗಳು ಇತ್ತ ಲಕ್ಷ್ಯಗೊಡಬೇಕು ಪ್ರಸ್ತುತ ಚರಿತ್ರವನ್ನು ಸಚಿತ್ರವಾಗಿ ಮಾಡಬೇಕೆಂದು ಬಹು ದಿವಸಗಳಿಂದ ಆಲೋಚಿಸಿದ್ದೆವು. ಆದರೆ ಮಹಾಯುದ್ಧವು ಈಗೀಗ ಮುಗಿದಿದ್ದರೂ ಚಿತ್ರಗಳಿಗೆ ಬೇಕಾಗುವ ಪ್ರಿಂಟಿಂಗಿನ ಸಾಮುಗ್ರಿಗಳ ಬೆಲೆಯನ್ನು ನೋಡಿದರೆ, ನಮ್ಮ ಆ ಮನೋರಥವು ಅಲ್ಪಾವಧಿಯಲ್ಲಿಯೇ ಶಾಂತವಾಗುವ ಪ್ರಸಂಗವು ಬಂದಿತು; ಮುಡಿವಾಳಪ್ಪನವರ ಭಾವಚಿತ್ರ, ಸಮಾಧಿಯು ಹಾಗೂ ಅವರ ಪಾದುಕೆಗಳ, ಹಾಗೂ ಕೈಯಲ್ಲಿ ಹಿಡಿಯುತಕ್ಕ ಕೋಲಿನ, ಮತ್ತು ಪಲ್ಲಂಗದ ಫೋಟೋ ಇವೇ ಮೊದಲಾದ ಚಿತ್ರಗಳನ್ನು ಪುಸ್ತಕದಲ್ಲಿ ಅಲ್ಲಲ್ಲಿ ಸೇರಿಸಿದ್ದರೆ ಪುಸ್ತಕವು ಬಹು ಅಂದವಾಗುತ್ತಿತ್ತು! ಈ ಕಾರ್ಯಕ್ಕೆ ನಮ್ಮ ಮುಡಿವಾಳಪ್ಪನವರ ಭಕ್ತಮಂಡಲಿಯು ಸಹಾಯ ಮಾಡಿದರೆ ಮುಂದಿನ ಆವೃತ್ತಿಯಲ್ಲಿ ಈ ಮೇಲೆ ಹೇಳಿದಂತೆ ಪುಸ್ತಕವನ್ನು ಶೃಂಗರಿಸಲಾಗುವದು! ಮುಡಿವಾಳಸ್ವಾಮಿಯ ಭಕ್ತರೂ ಕನ್ನಡದ ಅಭಿಮಾನಿಗಳೂ ಇದಕ್ಕೆ ಸಹಾಯ ಮಾಡಬಹುದಲ್ಲವೇ!

ನಮ್ಮ ಈ ಚರಿತ್ರನಾಯಕರ, ಯೋಗ್ಯತೆಯು ಬಹು ದೊಡ್ಡದೆಂದು ನಾವು ಬಿಚ್ಚಿ ಬರೆಯುವ ಕಾರಣವಿಲ್ಲ. ಯಾಕಂದರೆ ಸರ್ವೋತ್ಕೃಷ್ಟವಾದ ಅವರ ಚರಿತ್ರಾಮೃತವೇ ಆ ಕೆಲಸವನ್ನು ಮಾಡುವದು. ಇದರಲ್ಲಿ ಮಡಿವಾಳಪ್ಪನವರ ಘನತರವಾದ ಅಧಿಕಾರ ಸಂಪನ್ನತೆಯು ಚನ್ನಾಗಿ ವ್ಯಕ್ತವಾಗುತ್ತದೆ. ಈ ಮಹಾತ್ಮರ ಲೋಕಾನುರಾಗವೂ ಅವರ ದೈವೀಶಕ್ತಿಯೂ ಪ್ರಸಂಗೋಚಿತವಾಗಿ ವರ್ಣಿಸಲ್ಪಟ್ಟಿವೆ. ಭೂತವಾತ್ಸಲ್ಯವು ಅವರಲ್ಲಿ ಎಷ್ಟಿತ್ತೆಂಬುದು ಬರಗಾಲದಲ್ಲಿ ಅವರು ಮಾಡಿದ ಆಚರಣೆಯಿಂದ ಸಹಜವಾಗಿ ವ್ಯಕ್ತವಾಗುತ್ತದೆ. ಈ ಮಹಾತ್ಮರು ಒಮ್ಮೆ ಜನರಲ್ ಬಾನೇಸುಮಾರಿಯ ಕಾಲಕ್ಕೆ ಗರಗದ ಪೊಲೀಸ ಪಾಟೀಲನು "ನಿಮ್ಮ ಜ್ಯಾತಿಯು ಯಾವದೆಂದು ಬರೆಯಬೇಕು" ಎಂದು ಕೇಳಿದಾಗ ಮಡಿವಾಳಪ್ಪನವರು -"ನನ್ನ ಜ್ಯಾತಿ ಯಾವದೆಂದು ಏನು ಕೇಳುತ್ತೀಯಲೆ ಜಗತ್ತಿನೊಳಗಿನ ಎಲ್ಲ ಜಾತಿಗಳೂ ನನ್ನವು" ಎಂದು ಉತ್ತರ ಕೊಟ್ಟರಂತೆ! ಇದರಿಂದ ಮಡಿವಾಳಪ್ಪನವರು ಎಲ್ಲ ಧರ್ಮಗಳ ರಹಸ್ಯವನ್ನು ಬಲ್ಲವರೂ ವರ್ಣಾಶ್ರಮಗಳನ್ನು ಮೀರಿದವರೂ ಪೂರ್ಣಜ್ಞಾನಿಗಳೂ ಆಗಿದ್ದರೆಂದು ಕಂಡು ಬರುವದಲ್ಲದೆ, ಇವರು ಜ್ಯಾತಿಜ್ಯಾತಿಯ ದುರಭಿಮಾನವನ್ನೂ ಮಾತ್ಸರ್ಯವನ್ನೂ ನೀಗಲಾಡುವದಕ್ಕೆ ಬಹುಮಟ್ಟಿಗೆ ಕಾರಣರಾಗಿದ್ದರೆಂದೂ ಹೇಳಬಹುದು. ಸರ್ವಜ್ಞಕವಿಯು ಒಂದು ಪದ್ಯದಲ್ಲಿ "ಅಂದವನಿಗೆ ಏತರವೈರ"ವೆಂದು ಅಂದಂತೆ ನಮ್ಮ ಮಡಿವಾಳಪ್ಪನವರ ಸ್ಥಿತಿಯಿತ್ತೆಂದು ಹೇಳಲಾಗುವದು.

ಈ ಅಲೌಕಿಕ ಸತ್ಪುರುಷರ ಚರಿತ್ರೆಯನ್ನು ಸರ್ವರೂ ಓದಿಯೇ ತೀರಬೇಕೆಂದು ನಾವು ಖಂಡಿತವಾಗಿ ಹೇಳುವೆವು! ಯಾಕಂದರೆ ಆ ಮಹಾತ್ಮರ ಮಹಿಮೆಯೇ ಹಾಗಿರುವದು. ಸರ್ವಧರ್ಮದವರೂ ಅವರ ಭಕ್ತರಾಗಿರುವರು! ಅವರಿಂದ ಕಲ್ಯಾಣವನ್ನು ಹೊಂದಿರುವರು! ಜಗತ್ತಿನಲ್ಲಿ ಜ್ಯಾತಿಜ್ಯಾತಿಗಳಲ್ಲಿಯ ಬಾಂಧವ್ಯವನ್ನು ಸ್ಥಿರಗೊಳಿಸುವದಕ್ಕಾಗಿಯೇ ಸತ್ಪುರುಷರು ಬೇರಬೇರೆ ಜಾತಿಗಳಲ್ಲಿ ಹುಟ್ಟಿಬರುವರೆಂಬುದನ್ನು ಈ ಚರಿತ್ರದೊಳಗಿನ ಶ್ರೀಚಿದಂಬರದೀಕ್ಷಿತರ ಹಾಗೂ ಮಡಿವಾಳಪ್ಪನವರ ಸಂದರ್ಶನದ ಸಮಯದಿಂದ ನಮ್ಮ ವಾಚಕರು ಮನಗಾಣಬಹುದಾಗಿದೆ. ಒಟ್ಟಿಗೆ ಇಂಥ ದಿವ್ಯ ಮಹಾಪುರುಷರ ಚರಿತ್ರಾವಲೋಕನವನ್ನು ಮಾಡಿ ನಮ್ಮ ಕನ್ನಡ ಬಂಧುಗಳು ಕಲ್ಯಾಣಹೊಂದಲೆಂದು ಸದ್ಗುರುವನ್ನು ಪ್ರಾರ್ಥಿಸಿ ಈ ಪ್ರಸ್ತಾವನೆಯನ್ನು ಮುಗಿಸಿ ಬಿಡುವೆವು.

ತಾ|| ೧೦-೧-೧೯. | ಸಜ್ಜನವಿಧೇಯ,
ಕರ್ಪೂರ.

# ವಿಷಯಾನುಕ್ರಮಣಿಕೆ.



ಗರಗದ

# ಶ್ರೀ ಮಡಿವಾಳಪ್ಪನವರ ಚರಿತ್ರ.



## ಒಂದನೆಯ ಪ್ರಕರಣ.



### ಜನ್ಮ.



ಭಾಗ್ಯಶಾಲಿನಿಯಾದ ಕರ್ನಾಟಕ ಭೂಸುಂದರಿಯ ಪುಣ್ಯೋದರದಲ್ಲಿ ಕಿತ್ತೂರವೆಂಬದೊಂದು ಚಿಕ್ಕ ನಗರವು ಇರುವದಷ್ಟೇ; ಈ ಪುರಾತನವಾದ ಗ್ರಾಮದಲ್ಲಿ ಸುಮಾರು ನೂರು ವರ್ಷಗಳಾಚೆಯಲ್ಲಿ 'ಪ್ರಭು' ಸ್ವಾಮಿಗಳೆಂಬೋರ್ವ ಮಹಂತರು ಆಗಿ ಹೋದರು. ಪ್ರಭುಸ್ವಾಮಿಗಳು ಕಿತ್ತೂರಲ್ಲಿರುವದೊಂದು ಕಲ್ಮಠಕ್ಕೆ ಅಧಿಪತಿಗಳಾಗಿ, ವೀರಶೈವ ಧರ್ಮದ ಗುರುಗಳಾಗಿದ್ದರು. ಆ ಮಹಾತ್ಮರಲ್ಲಿ ಭೂತದಯೆ, ಪರೋಪಕಾರಾದಿ ಸದ್ಗುಣಗಳು ಮೂರ್ತಿಮಂತವಾಗಿ ನೆಲಸಿದ್ದವು. ಅವರ ವೈರಾಗ್ಯವು ಅತ್ಯಂತ ಪ್ರಖರವಾಗಿತ್ತು. ಅವರು ಸದಾಚಾರಸಂಪನ್ನರಾಗಿ ಈಶ್ವರಸೇವೆಯಲ್ಲಿ ಕಾಲಕಳೆಯುತ್ತಿರಲು. ದುರ್ಧರವಾದ ಮುಪ್ಪು ಅವರನ್ನು ಆವರಿಸ ತೊಡಗಿತು. ಆಗ ಆ ಪ್ರಭುಸ್ವಾಮಿಗಳವರು ತಮ್ಮ ಮನಸ್ಸಿನಲ್ಲಿ—"ನನಗಂತೂ ಮುಪ್ಪು ಬಂತು! ಇನ್ನು ಬಹಳಕಾಲ ನಾನು ಬಾಳಲಾರೆನು. ಆದರೆ ಇನ್ನು ಮುಂದೆ ನನ್ನ ತರುವಾಯ ಕಲ್ಮಠಕ್ಕೆ ಯಾರನ್ನು ನಿಯಮಿಸಬೇಕು? ಲೋಕೋದ್ಧಾರಕನಾದ ಮಹಾತ್ಮನೇ ಈ ಮಠಕ್ಕೆ ಅಧಿಪತಿಯಾಗಬೇಕಲ್ಲದೆ, ಸಾಮಾನ್ಯರು ಆಗ ಕೂಡದು" ಎಂದು ಯೋಚಿಸಿ, ಅಂಥ ಮಹಂತವ್ಯಕ್ತಿಯನ್ನು ಸಂಪಾದಿಸುವದಕ್ಕಾಗಿ ಈಶ್ವರೋಪಾಸನೆ ಮಾಡ ತೊಡಗಿದರು.

ಈ ಮೇರೆಗೆ ಲೋಕಕಲ್ಯಾಣಕ್ಕಾಗಿ ಪುತ್ರಕಾಮೇಷ್ಟಿಯಿಂದ ಈಶ್ವರಾರಾಧನೆಯಲ್ಲಿ ತೊಡಗಿದ ಆ ಮಹಾತ್ಮರು ಪ್ರತಿನಿತ್ಯ ದೊಡ್ಡ ನಸುಕಿನಲ್ಲೆದ್ದು, ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ತೋಟಕ್ಕೆ ಹೋಗಿ ತರತರದ ಹೂಗಳನ್ನು ತರುತ್ತಿದ್ದರು. ಸ್ವಾಮಿಗಳವರ ಲಿಂಗಪೂಜೆಯು ಆ ವಿವಿಧ ಪುಷ್ಪಗಳಿಂದ ಬಲು ಮನೋಹರವಾಗಿ ಸಾಗುತ್ತಿತ್ತು. ಭಜನ-ಪೂಜನ ಅನ್ನದಾನಾದಿಗಳಿಂದ ಅವರ ಈಶ್ವರಾರಾಧನೆಯು ತೇಜಸ್ಸು ಹೆಚ್ಚಿತು. ಹೀಗೆ ಕೆಲವು ದಿವಸಗಳ ವರೆಗೆ ಸ್ವಾಮಿಗಳು ಈಶ್ವರೋಪಾಸನೆಯನ್ನು ಮಾಡಲು ಸದಾಶಿವನು ಸಂತುಷ್ಟನಾಗಿ, ಒಂದಾನೊಂದು ದಿನ ಪ್ರಭುಸ್ವಾಮಿಗಳು ಲಿಂಗಪೂಜೆಗೆ ಕುಳಿತಾಗ ಪ್ರತ್ಯಕ್ಷನಾದನು. ಆಗ ಸದಾಶಿವನು ಪ್ರಭುಸ್ವಾಮಿಗಳನ್ನು ತಕ್ಕೈಸಲು, ಅವರು ಧ್ಯಾನದಿಂದ ಎಚ್ಚತ್ತರು. ಎದುರಿಗೆ ನಿಂತುಕೊಂಡಿದ್ದ ತೇಜೋಮಯನಾದ ಸಾಂಬನನ್ನು ಕಂಡರು. ಆಗ ಆ ದಿವ್ಯ ಕಾಂತಿಯಿಂದ ಸ್ವಾಮಿಗಳ ಕಣ್ಣುಗಳು ಮುಚ್ಚಿದವು. ಪಂಚವದನನೂ, ಜಟಾಭೂಷಿತನೂ ತ್ರಿಶೂಲ - ಡಮರುಗಳನ್ನು ಧರಿಸಿದವನೂ ಆದ ಷಡ್ಗುಣೈಶ್ವರ್ಯದಿಂದ ಒಪ್ಪುವ ಪರಶಿವನನ್ನು ನೋಡಿ ಸ್ವಾಮಿಗಳು ಧನ್ಯರಾದರು. ಭಕ್ತಶ್ರೇಷ್ಠರಾದ ಪ್ರಭುಸ್ವಾಮಿಗಳು ಕೈಮುಗಿದುಕೊಂಡು ನಿಂತಿರಲು, ಸದಾಶಿವನು ಸುಹಾಸ್ಯಪೂರ್ಣ ಮಧುರವಾದ ವಾಣಿಯಿಂದ— "ಭಕ್ತಶಿರೋಮಣಿಯೇ, ನನ್ನನ್ನು ಕುರಿತು ಇಷ್ಟು ಕಠಿಣವಾದ ಆರಾಧನೆಯನ್ನು ಯಾಕೆ ಮಾಡಿದೆ? ನಿನ್ನ ಇಚ್ಛೆಯು ಏನಿರುವದು?" ಎಂದು ನುಡಿದನು. ಚಂದ್ರಮೌಳಿಯು ನುಡಿದ ಈ ಮಾತುಗಳನ್ನು ಕೇಳಿ ಪ್ರಭುಸ್ವಾಮಿಗಳು —"ಕರುಣಾಳುವೇ, ಮಂಗಳಪ್ರದನಾದ ನಿನ್ನ ದರ್ಶನದಿಂದ ನನ್ನ ಎಲ್ಲ ಮನೋರಥಗಳು ಪೂರ್ಣವಾದಂತಾದವು. ಜಗದೀಶನೇ, ಇನ್ನು ನನ್ನ ಇಚ್ಛೆಯೇನಿರಬೇಕು?" ಎನಲು. ಭಕ್ತವತ್ಸಲನಾದ ಸಾಂಬನು— "ಭಕ್ತಶ್ರೇಷ್ಠನೇ, ಏನಾದರೂ ವರಗಳನ್ನು ಬೇಡಿಕೋ, ದುರ್ಲಭವಾಗಿದ್ದರೂ ಕೊಡುವೆನು." ಎಂದು ಅಂದನು, ಆಗ ಪ್ರಭುಸ್ವಾಮಿಗಳು ಆನಂದಭರಿತರಾಗಿ —ಎಲೈ ದೇವಾಧಿದೇವನೇ, ನೀನು ನನಗೆ ವರವನ್ನು ಕರುಣಿಸುವನಾದರೆ, ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡುವ ಅಲೌಕಿಕ ಪೌರುಷವುಳ್ಳ ಮಗನನ್ನು ಕೊಡು; ನಾನು ವಿರಕ್ತನಿದ್ದುದರಿಂದ ಅಯೋನಿಜನಾದ ಮಗನನ್ನೇ ಕರುಣಿಸು; ಎಂದು ಬೇಡಿಕೊಂಡರು. ಭಕ್ತನ ಈ ಪ್ರಾರ್ಥನೆಗೆ ಸದಾಶಿವನು ಒಪ್ಪಿಕೊಂಡು, ಸಂಗಡ ಬಂದಿದ್ದ ಪ್ರತಾಪಶಾಲಿಯಾದ ವೀರಭದ್ರನನ್ನು

ನೋಡಿ—ಮಗುವೇ, ಕಲಿಯುಗದಲ್ಲಿ ನಿನ್ನ ಅವತಾರವು ಆಗುವದು ಅವಶ್ಯವಾಗಿರುವದು. ದುರ್ಜನರ ಪ್ರಾಬಲ್ಯವು ಹೆಚ್ಚ ತೊಡಗಿರುವದು. ನೀನು ನಿಗ್ರಹಾನುಗ್ರಹ ಶಕ್ತಿಯುಕ್ತನಾಗಿ ಅವತರಿಸಿ, ದುರ್ಜನರನ್ನು ಬಗ್ಗುಬಡಿದು ಸಜ್ಜನರ ಸಂರಕ್ಷಣೆಯನ್ನು ಮಾಡಬೇಕು. ಅದಕ್ಕಾಗಿ ನೀನು ಶಿಶುರೂಪವನ್ನು ಧಾರಣ ಮಾಡಿ ಈ ಸ್ವಾಮಿಗಳಿಗೆ ಕಾಣಿಸಿಕೋ, ಅಂದನು. ಸಾಂಬನ ಅನುಜ್ಞೆಯನ್ನು ಕೇಳಿ ವೀರಭದ್ರನು ವಿಷಣ್ಣವದನನಾಗಿ ತಂದೆಯನ್ನು ಕುರಿತು—"ಪ್ರಭುವೇ, ನಿನ್ನ ವಿಯೋಗವನ್ನು ನಾನು ಹ್ಯಾಗೆ ಸಹನ ಮಾಡಲಿ? ಯಾವಾಗಲೂ ನಿನ್ನ ಚರಣಸೇವೆಯಲ್ಲಿ ಆಸಕ್ತನಾದ ನಾನು ನಿನ್ನನ್ನು ಬಿಟ್ಟು ಒಬ್ಬನೇ ಘೋರವಾದ ಈ ಕಲಿಸಾಮ್ರಾಜ್ಯದಲ್ಲಿ ಹ್ಯಾಗೆ ವಾಸಮಾಡಲಿ?" ಎಂದನು.

ವೀರಭದ್ರನು ಇಂತು ಆಡಿದ ಮಾತುಗಳನ್ನು ಕೇಳಿ ಸದಾಶಿವನು—"ಅಪ್ಪಾ, ಮಗನೇ ಭಯಪಡಬೇಡ, ಧರ್ಮರಕ್ಷಣಾರ್ಥವಾಗಿ ನಾನೂ 'ಚಿದಂಬರ'ನೆಂಬ ಹೆಸರಿನಿಂದ ಅವತರಿಸಬೇಕಾಗಿದೆ. ನಮ್ಮ ಪ್ರಮಥಗಣವೆಲ್ಲ ನನ್ನ ಸಂತೋಷಾರ್ಥವಾಗಿ ಭೂಲೋಕದಲ್ಲಿ ಅವತರಿಸುವದು. ಷಣ್ಮುಖನು ಚನ್ನಬಸವಶಾಸ್ತ್ರಿಯಾಗುವನು; ಗಣಪತಿಯು ಸಿದ್ಧಮಲ್ಲಾರ್ಯನಾಗುವನು; ನಂದಿಯು ಅಡವೀಸ್ವಾಮಿಯೆಂಬ ಹೆಸರಿನಿಂದ ಹುಟ್ಟುವನು; ಭೃಂಗಿಯು ಬೂದಯ್ಯನೆಂಬ ಹೆಸರು ಧರಿಸುವನು; ಕಾಲಭೈರವನು ನಾಗಲಿಂಗನೆಂದೆನಿಸಿಕೊಳ್ಳುವನು; ಏಳು; ಇನ್ನು ತಡವೇತಕ್ಕೆ? ನನ್ನ ಈ ಆಜ್ಞೆಯನ್ನು ಎಲ್ಲರಿಗೂ ತಿಳುಹಿಸು; ಇಗೋ ನಾನು ಹೊರಟೆನು, ಎಂದು ನುಡಿದು, ಪ್ರಭುಸ್ವಾಮಿಗಳನ್ನು ನೋಡಿ—"ಬೇಗನೇ ನಿನ್ನ ಇಷ್ಟಾರ್ಥವು ಕೈಗೂಡುವದು" ಎಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಇತ್ತ ಸ್ವಾಮಿಗಳು ಶಿವ-ವೀರಭದ್ರರ ಸಂವಾದದಿಂದ ಆಶ್ಚರ್ಯಚಕಿತರಾಗಿ ತಮ್ಮ ಮನೋರಥವು ಫಲಿಸಿತೆಂದು ಸಮಾಧಾನಪಟ್ಟು ತಪಸ್ಸನ್ನು ಮುಗಿಸಿ, ಆನಂದದಿಂದ ಇರತೊಡಗಿದರು.

ಈ ಮಾತಿಗೆ ಮುಂದೆ ಕೆಲವು ದಿವಸಗಳು ಕ್ರಮಿಸಿ ಹೋದವು; ಒಂದು ದಿನ ಸೂರ್ಯೋದಯದ ಸಮಯವಾಗಿದೆ; ತಂಗಾಳಿಯು ಸುಳ್ಳನೆ ಸುಳಿಯುತ್ತಿರುವದರಿಂದ ಉಲ್ಲಾಸವು ಹೆಚ್ಚತೊಡಗಿದೆ; ಆಗಾಗ್ಗೆ ಉದುರುತ್ತಿರುವ ತಂತುವರ್ಣಿಗಳಿಂದ ವನಶ್ರೀಯು ರಮಣೀಯವಾಗಿ ತೋರುತ್ತಲಿದೆ; ಇಂಥ ಸುಮಂಗಲವಾದ ಸಮಯದಲ್ಲಿ ಪ್ರಭುಸ್ವಾಮಿಗಳವರು ಒಂದು ಹೂದೋಟಕ್ಕೆ ಹೋದರು. ಆಗ ಅಲ್ಲಿ ಶಿಶುವಿನ ರೋದನಸ್ವರವು ಅಸ್ಪಷ್ಟ [illegible] ಕೇಳ

ಬರತೊಡಗಿತು. ಅದನ್ನು ಲಾಲಿಸಿ ಸ್ವಾಮಿಗಳು ತಮ್ಮ ಮನದಲ್ಲಿ—ನಿರ್ಜನವಾದ ಈ ತೋಟದಲ್ಲಿ ಇದೇನು ಆಶ್ಚರ್ಯವು? ಎಂದು ಅಂದುಕೊಂಡು, ಆ ಸ್ವರವು ಕೇಳಬರುವಲ್ಲಿಗೆ ಹೋದರು. ಆಗ ಅಲ್ಲಿ ನಳನಳಿಸುವ ಬಾಳೆಯ ಎಲೆಯ ಮೇಲೆ ಒಂದು ಸುಂದರವಾದ ಶಿಶುವು ಮಲಗಿದ್ದನ್ನು ಅವರು ಕಂಡರು. ಆ ಶಿಶುವು ಒಮ್ಮೆ ಅಳುವದು, ಒಮ್ಮೆ ನಗುವದು, ಮತ್ತೊಮ್ಮೆ ಕೈಬೆರಳನ್ನು ಬಾಯಲ್ಲಿಟ್ಟುಕೊಂಡು ಸುಮ್ಮನಾಗುವದು. ಹೀಗೆ ವಿಚಿತ್ರಲೀಲೆಗಳಿಂದ ಮುದ್ದುಬರುವ ಆ ಕೂಸನ್ನು ನೋಡಿ ಸ್ವಾಮಿಗಳವರು ಶಿವಪ್ರಭುವಿನ ವರಪ್ರಸಾದವನ್ನು ನೆನೆಸಿ ಹರ್ಷನಿರ್ಭರರಾದರು. ಉಮಾರಮಣನ ಅಪ್ಪಣೆಯಂತೆ ವೀರಭದ್ರನೇ ಶಿಶುರೂಪತಾಳಿರುವನೆಂದು ಅವರು ನಿಶ್ಚಯಿಸಿದರು. ಕ್ಷಣಹೊತ್ತು ಕೌತುಕದಿಂದ ಆ ಕೂಸನ್ನು ನೋಡುತ್ತ ನಿಂತು, ಬಳಿಕ ಸ್ವಾಮಿಗಳವರು ಅದನ್ನು ಭರದಿಂದ ಎತ್ತಿಕೊಂಡು ಬಹುವಿಧವಾಗಿ ಮುದ್ದಾಡಿದರು. ಬಾಲಕನ ಅಂಗಲಕ್ಷಣಗಳನ್ನು ನೋಡಿನೋಡಿದಂತೆ ಸ್ವಾಮಿಗಳ ಅಂತಃಕರಣವು ಉಕ್ಕಿಬರತೊಡಗಿತು. ಅಪ್ಪಿಕೊಂಡು ಮುದ್ದು ಕೊಟ್ಟು ಮನಸ್ಸು ದಣಿದಮೇಲೆ ಸ್ವಾಮಿಗಳವರು ಆ ಶಿಶುವನ್ನು ತಕ್ಕೊಂಡು ಮಠಕ್ಕೆ ನಡೆದರು. ಆಗಿನ ಕಾಲದಲ್ಲಿ ಸ್ವಾಮಿಗಳವರ ಮುಖಮುದ್ರೆಯ ಸುಪ್ರಸನ್ನತೆಯನ್ನು ವರ್ಣಿಸುವದನ್ನು ಯಾರಿಂದಲೂ ಆಗದು. ಷಡ್ಗುಣೈಶ್ವರ್ಯ ಸಂಪನ್ನನಾದ ಸಾಂಬನು ವರವನ್ನಿತ್ತಂತೆ ನನಗೆ ಶಿಶುವನ್ನು ದಯಪಾಲಿಸಿದನೆಂದು ಸ್ವಾಮಿಗಳು ಸಂಪೂರ್ಣವಾಗಿ ತಿಳಿದರು.

ಈ ಮೇರೆಗೆ ಪ್ರಭುಸ್ವಾಮಿಗಳವರು ಇಷ್ಟಾರ್ಥವು ಕೈಗೂಡಿದ್ದಕ್ಕಾಗಿ ಆನಂದಪಡುತ್ತ ಮಠಕ್ಕೆ ಬಂದು, ತಮ್ಮ ಪಾಠಶಾಲೆಯ ಒಬ್ಬ ಅಧ್ಯಾಪಕನ ಹೆಂಡತಿಯನ್ನು ಕರೆದು—ತಾಯಿ, ನಾಗಲಾಂಬಿಕೆ, ಇಗೋ ಈ ಮಗುವನ್ನು ಎಂದು ನುಡಿದು, ಆ ಶಿಶುವನ್ನು ಆಕೆಯ ವಶಕ್ಕೆ ಕೊಟ್ಟರು. ನಾಗಲಾಂಬಿಕೆಗಾದರೂ ಮಕ್ಕಳಿದ್ದಿಲ್ಲ; ಆದ್ದರಿಂದ ಅವಳು ಆ ಶಿಶುವನ್ನು ಅತ್ಯಂತ ಪ್ರೀತಿಯಿಂದ ಜೋಪಾನಮಾಡತೊಡಗಿದಳು. ಹಡೆಯದ ಮಕ್ಕಳು ಪಡೆಯುದಭಾಗ್ಯವು ಪುಣ್ಯವಂತರಿಗಲ್ಲದೆ ಅನ್ಯರಿಗೆ ಲಭಿಸಬಹುದೆ? ಆ ಕೂಸಿನ ವಿಶಾಲವಾದ ಹಣೆಯು, ಸರಳವಾದ ಮೂಗೂ, ದೊಡ್ಡವೂ ಕಾಂತಿಯುಕ್ತವೂ ಆದ ಕಣ್ಣುಗಳೂ, ನಿಡಿದಾದ ತೋಳುಗಳೂ, ಗಂಭೀರವಾದ ನಾಭಿಕಮಲವೂ ಆ ನಾಗಲಾಂಬಿಕೆಯ ಮನಸ್ಸನ್ನು ಎಳಕೊಂಡವು. ಹನ್ನೆರಡನೆಯ ದಿವಸ ಆ ಶಿಶುವಿಗೆ ‘ಮಡಿವಾಳ’ನೆಂಬ ಹೆಸರನ್ನಿಟ್ಟರು. ಆಗ ಮುತ್ತೈದೆಯರು ಜೋ, ಜೋ,

ಎಂದು ಮಂಗಲ ಗೀತವನ್ನು ಪಾಡಿದರು. ಸಕಲರಿಗೂ ಆನಂದವಾಯಿತು. ಮಡಿವಾಳನು ಹುಟ್ಟಿದಾಗ ಶಾಲಿವಾಹನ ಶಕವು ೧೭೫೮ ಇತ್ತೆಂದೂ, ಕ್ರಿಸ್ತೀಶಕವು ೧೮೩೬ ಇತ್ತೆಂದೂ ಗೊತ್ತಾಗುತ್ತದೆ.

ಎರಡನೆಯ ಪ್ರಕರಣ.



## ಬಾಲಲೀಲೆಗಳು.



ಮಡಿವಾಳನು ಶುಕ್ಲಪಕ್ಷದ ಬಿದಿಗೆಯ ಚಂದ್ರನಂತೆ ದೊಡ್ಡವನಾಗುತ್ತ ತನ್ನ ತೊದಲ್ನುಡಿಗಳಿಂದಲೂ, ತಪ್ಪು ಹೆಜ್ಜೆಗಳಿಂದಲೂ ಪ್ರಭುಸ್ವಾಮಿಗಳನ್ನೂ, ನಾಗಲಾಂಬಿಕೆಯನ್ನೂ ಸಂತೋಷಗೊಳಿಸುತ್ತಿದನು. ದೇವಾಂಶಸಂಭೂತನಾದ ಆತನು ಸ್ವಲ್ಪ ದೊಡ್ಡವನಾದ ಬಳಿಕ ಚಿಕ್ಕಮಕ್ಕಳಸ್ವಭಾವಕ್ಕನುಸರಿಸಿ ಕಿಡಿಗೇಡಿತನವನ್ನು ಮಾಡತೊಡಗಿದನು. ಓಣಿಯಲ್ಲಿ ಆಡುವ ಓರಿಗೆಯ ಹುಡುಗರನ್ನು ದಬ್ಬಿಕೊಟ್ಟು ಓಡಿಹೋಗುವನು; ಆಟದಲ್ಲಿ ಇಲ್ಲದ ನೆವತೆಗೆದು ತನಗಿಂತ ಬಲಿಷ್ಠರಲ್ಲದವರನ್ನು ಬಡಿಯುವನು; ಗುಂಡು ಚಂಡುಗಳ ಆಟಗಳಲ್ಲಿ ಹುಡುಗರನ್ನು ಗೋಳಾಡಿಸುವನು; ಮಡಿವಾಳನು ತೆಗೆಯುವ ಜಗಳಗಳನ್ನು ತೀರಿತೀರಿಸಿ, ಮುಂದಿಗೆ ಸಮಾಧಾನ ಹೇಳಿ ಹೇಳಿ, ಪ್ರಭುಸ್ವಾಮಿಗಳು ಬೇಸತ್ತರು. ಮಡಿವಾಳನ ಕಾಯಕವೇನೂ ಕಡಿಮೆಯಾಗಲಿಲ್ಲ. ಒಂದು ದಿನ ಮಡಿವಾಳನು, ತೋಟದೊಳಗೆ ಆಡುತ್ತಿರುವಾಗ ಒಂದುದೊಡ್ಡ ನಾಗರಹಾವು ಹರಿದುಹೋಗುತ್ತಿರುವದನ್ನು ಕಂಡು ಅದರ ಬಾಲವನ್ನು ಹಿಡಿದು ಎಳೆಯುಹತ್ತಿದನು. ಕೂಡಿದ ಹುಡುಗರೆಲ್ಲರು ಅಂಜಿ ಹಿಂದಕ್ಕೆ ಸರಿಯುಹತ್ತಿದರು. ಅವರು ದೂರದೂರ ಸರಿದಂತೆ ಮಡಿವಾಳನು ಅದನ್ನು ಮತ್ತಿಷ್ಟು ಅಂಜಿಸತೊಡಗಿದನು. ಆಗ ಆ ಹುಡುಗರು ದಿಕ್ಕಾಪಾಲಾಗಿ ಓಡಿಹೋಗಿ ಪ್ರಭುಸ್ವಾಮಿಗಳ ಮುಂದೆ ಮಡಿವಾಳನ ಈ ಕೃತಿಯನ್ನು ಹೇಳಿದರು. ಅದನ್ನು ಕೇಳಿ ಸ್ವಾಮಿಗಳು ಗಾಬರಿಗೊಂಡು ಲಗುಬಗೆಯಿಂದ ತೋಟಕ್ಕೆ ಹೋದರು. ನೋಡುತ್ತಾರೆ; ನಿಜವಾಗಿಯೇ ಮಡಿವಾಳನು ಆ ಹಾವಿನ ಕೂಡ ಆಟವಾಡುತ್ತಿದ್ದನು. ಆಗ ಸ್ವಾಮಿಗಳು ಮಡಿವಾಳನಿಗೆ ಸಿಟ್ಟು ಮಾಡಿ, ಅವನನ್ನು ಮನೆಗೆ ಕರಕೊಂಡು

ಬಂದರು. ಮಡಿವಾಳನು ಮನುಷ್ಯನಲ್ಲೊಂಬಡನ್ನು ಬಲ್ಲವರಾಗಿದ್ದರೂ ಪ್ರಭುಸ್ವಾಮಿಗಳು ಮಾಯೆಗೆ ಒಳಗಾಗುತ್ತಿದ್ದರು. ಮೋಹವೆಂಬುವದು ಬಹು ಬಲಾಢ್ಯವಿರುವದು.

ಹೀಗೆ ಮಡಿವಾಳನು ಪುಂಡತನವನ್ನು ಮಾಡುತ್ತಿರಲು, ಒಂದು ದಿನ ಮಲ್ಲಸರ್ಜದೇಸಾಯರು ಪ್ರಭುಸ್ವಾಮಿಗಳ ದರ್ಶನಕ್ಕೆಂದು ಕಲ್ಮಠಕ್ಕೆ ಬಂದರು. ಸ್ವಾಮಿಗಳವರು ತಮ್ಮ ಬಳಿಯಲ್ಲಿದ್ದ ಮಡಿವಾಳನನ್ನು ಕುರಿತು—"ಬಾಳಾ, ಅಪ್ಪಾಜಿಯುವರು ಬಂದಿರುವರು; ಮಣೆ ಹಾಕು" ಅಂದರು; ಆಗ ಧಿಟ್ಟಮಡಿ ವಾಳನು—"ನಾನೇ ಅವರ ಅಪ್ಪಾ, ನನಗೆಲ್ಲಿಯ ಅಪ್ಪನು?" ಎಂದು ನುಡಿದನು. ದೇಸಾಯರು ಮಡಿವಾಳನ ಮಾತಿಗೆ ನಕ್ಕರು. ಚಿಕ್ಕಮಕ್ಕಳು ಹೇಗೆ ಮಾತಾಡಿ ದರೂ ಚಂದವು! ಒಮ್ಮೆ ಶ್ರಾವಣಮಾಸದಲ್ಲಿ ಪ್ರಭುಸ್ವಾಮಿಗಳು ಗಣಾರಾಧನೆ ಯನ್ನು ನಡಿಸಿದಾಗ ಪೂಜೆಗೆ ಕುಳಿತ ಗೋಕಾವಿಯ ಬಡದೆಪ್ಪನವರ ಕೈಯಲ್ಲಿಯ ಲಿಂಗವನ್ನು ಮಡಿವಾಳನು ಪಟ್ಟನೆ ಒಡಿದು ಓಡಿ ಹೋದನು. ಪ್ರಭುಸ್ವಾಮಿ ಗಳು ಸಿಟ್ಟಿಗೆದ್ದು ಅವನನ್ನು ಹೊಡೆಯ ಹೋದರು. ಆದರೆ ಮಡಿವಾಳನು, ಓಡಿ ಹೋಗಿ ನಾಗಲಾಂಬಿಕೆಯ ಬೆನ್ನು ಬಿದ್ದದ್ದರಿಂದ ಪ್ರಭುಸ್ವಾಮಿಗಳ ಆಟವು ಸಾಗಲಿಲ್ಲ. ಸ್ವಾಮಿಗಳೂ ನಾಗಲಾಂಬಿಕೆಯೂ ಮಾತಾಡುತ್ತ ನಿಂತಿರು ವಷ್ಟರಲ್ಲಿ ಮಡಿವಾಳನು ಓಡಿ ಹೋಗಿ ಹಿತ್ತಲದೊಳಗಿನ ಒಂದು ಬಾವಿಯಲ್ಲಿ ದುಡುಮ್ಮನೆ ಹಾರಿಕೊಂಡು ಬಿಟ್ಟನು. ಆ ಸಪ್ಪಳವನ್ನು ಕೇಳಿ ನಾಗಲಾಂಬಿ ಕೆಯು ಹೌಹಾರಿ ಎದೆ ಎದೆ ಬಡಕೊಳ್ಳುತ್ತ ಬಾವಿಯ ಹತ್ತರ ಹೋದಳು. ಪ್ರಭುಸ್ವಾಮಿಗಳೂ ಗಾಬರಿಯಾಗಿ ಬಾವಿಯ ಬಳಿಗೆ ಹೋದರು. ಕ್ಷಣಮಾತ್ರ ದಲ್ಲಿ ಅಲ್ಲಿ ಒಂದು ದೊಡ್ಡ ಜಾತ್ರೆನೆರೆದಂತಾಯಿತು. ಎಲ್ಲರ ಮೋರೆಗಳೂ ಬಾಡಿದವು; ಪ್ರಭುಸ್ವಾಮಿಗಳು ಕಣ್ಣೀರು ಉದರಿಸ ಹತ್ತಿದರು. ನಾಗಲಾಂಬಿ ಕೆಯ ಆಕ್ರೋಶಕ್ಕಂತೂ ಪಾರಾವಾರವೇ ಇಲ್ಲದಂತಾಯಿತು. ಆಗ ಆಕೆಯು ತಾನೂ ಬಾವಿಯಲ್ಲಿ ಬೀಳುತ್ತೇನೆಂದು ಹವಣಿಸಹತ್ತಿದಳು. ಆದರೆ ಅಲ್ಲಿ ನೆರೆದ ಹೆಂಗಸರು ಆಕೆಯನ್ನು ಗಟ್ಟಿಯಾಗಿ ಹಿಡಿದದ್ದರಿಂದ ಆಕೆಯ ಹವಣಿಕೆಯು ನಡೆ ಯಲಿಲ್ಲ. ನೆರೆದವರೆಲ್ಲರು ಮಡಿವಾಳನ ಗುಣಗಳನ್ನು ನೆನೆ-ನೆನಿಸಿ ವಿಷಾದಪಡತೊ ಡಗಿದರು. ಹೀಗೆ ಬಾವಿಯ ದಂಡೆಯ ಮೇಲೆ ಶೋಕಸಾಮ್ರಾಜ್ಯವು ಬೆಳೆಯುತ್ತ ನಡೆದಿರಲು, ಮಡಿವಾಳನು ಯಾವ ಮಾಯೆಯಿಂದಲೋ ಮೇಲೆ ಬಂದು ನಾಗಲಾಂಬಿಕೆಯನ್ನು ಅಪ್ಪಿಕೊಂಡನು. ಮಡಿವಾಳನನ್ನು ಹುಡುಕುವದಕ್ಕೆಂದು

ಬಾವಿಯಲ್ಲಿ ಇಳಿದ ಜನರು ನಾಚಿಕೊಂಡು ಮೇಲಕ್ಕೆ ಬಂದರು. ಆಗ ಅಲ್ಲಿ ಕೂಡಿದ ಜನರಿಗಾದ ಆನಂದವನ್ನು, ವಿಶೇಷವಾಗಿ ನಾಗಲಾಂಬಿಕೆಗೂ ಪ್ರಭುಸ್ವಾಮಿಗಳಿಗೂ ಆದ ಸಂಭ್ರಮವನ್ನು ವರ್ಣಿಸಲಶಕ್ಯವು. ಮಡಿವಾಳನ ಈ ಅದ್ಭುತ ಕೃತಿಯಿಂದ ಜನರು ಆಶ್ಚರ್ಯಚಕಿತರಾದರು.

ಹೀಗೆ ಮಡಿವಾಳನ ಬಾಲಲೀಲೆಗಳು ನಡೆದಿರಲು, ಮಲ್ಲಸರ್ಜದೇಸಾಯಿಯು ಈ ವರ್ತಮಾನವನ್ನು ಕೇಳಿ, ಕವಿರುದ್ರಾರ್ಯರೆಂಬ ಒಬ್ಬ ಪಂಡಿತರನ್ನು ಕರೆದು—"ಪಂಡಿತರೇ, ಮಡಿವಾಳನ ಲೀಲೆಗಳು ವಿಚಿತ್ರವಾಗಿರುವವು. ನೀವು ಹೋಗಿ ಅವನನ್ನು ಕಂಡು ಬನ್ನಿರಿ" ಎಂದು ಅವರನ್ನು ಕಳುಹಿಸಿಕೊಟ್ಟನು. ಪಂಡಿತರು ಕಲ್ಮಠಕ್ಕೆ ಬಂದು ಪ್ರಭುಸ್ವಾಮಿಗಳಿಗೆ ನಮಸ್ಕಾರ ಮಾಡಿ ಮಡಿವಾಳನನ್ನು ತೋರಿಸಬೇಕೆಂದು ನುಡಿದರು. ಮಡಿವಾಳನು ಕೆರೆಬಾವಿಗಳ ನೋಬತಿಯಾದಾನೆಂದು ತಿಳಿದು ಪ್ರಭುಸ್ವಾಮಿಗಳು ಆಗ ಆವನನ್ನು ಒಂದು ಕೋಣೆಯಲ್ಲಿ ಪ್ರತಿಬಂಧಿಸಿಟ್ಟಿದ್ದರು. ಪಂಡಿತರು ಕೇಳಿದ್ದರಿಂದ ಅವರಿಗೆ ಅವನನ್ನು ತೋರಿಸಬೇಕೆಂದು ಪ್ರಭುಸ್ವಾಮಿಗಳು ಕೋಣೆಯಬಾಗಿಲವನ್ನು ತೆರೆದರು. ಆದರೆ ಅಲ್ಲಿ ಮಡಿವಾಳನು ಇದ್ದರಷ್ಟೇ; ಆಗ ಪ್ರಭುಸ್ವಾಮಿಗಳು ಗಾಬರಿಯಾಗಿ ಮಡಿವಾಳನು ಎಲ್ಲಿ ಮಾಯವಾದನೆಂದು ಯೋಚಿಸುತ್ತ ನಿಂತಿರಲು, ನಾಗಲಾಂಬಿಕೆಯು ಅವರ ಬಳಿಗೆ ಬಂದು—ಮಡಿವಾಳನು ಬರಿಮೈಯಿಂದ ಇರುವನು; ಅವನ ಅಂಗಿ, ಟೊಪ್ಪಿಗೆಗಳನ್ನು ಕೊಡಿರೆಂದು ಕೇಳಿದಳು. ಸ್ವಾಮಿಗಳಿಗೆ ಆಶ್ಚರ್ಯವಾಯಿತು. ಅವರು ಧೈರ್ಯ ತಾಳಿ, ಮಡಿವಾಳನು ಎಲ್ಲಿರುವನು! ಎಂದು ಕೇಳಿದರು. ಅಡಿಗೆಯ ಮನೆಯಲ್ಲಿ ಕಜ್ಜಾಯವನ್ನು ತಿನ್ನುತ್ತ ಕುಳಿತಿರುವನೆಂದು ನಾಗಲಾಂಬಿಕೆಯು ಹೇಳಲು, ಪ್ರಭುಸ್ವಾಮಿಗಳು ಆ ಪಂಡಿತರೊಡನೆ ಅಡಿಗೆಯಮನೆಗೆ ಹೋದರು. ಅಲ್ಲಿಮಡಿವಾಳನು ಹಸನ್ಮುಖನಾಗಿ ಆನಂದದಿಂದ ಕಜ್ಜಾಯವನ್ನು ತಿನ್ನುತ್ತಿರುವದನ್ನು ನೋಡಿ ಅವರೀರ್ವರಿಗೂ ಬಹಳ ಆನಂದವಾಯಿತು. ಕೋಣೆಯೊಳಗೆ ಪ್ರತಿಬಂಧಿಸಿಟ್ಟಿದ್ದ ಮಡಿವಾಳನು ಅಡಿಗೆಯ ಮನೆಯಲ್ಲಿ ಹ್ಯಾಗೆಬಂದನೆಂಬದನ್ನು ತಿಳಿಯದೆ ಪ್ರಭುಸ್ವಾಮಿಗಳೂ ಆ ಪಂಡಿತರೂ ಬಹಳಗೊಂದಲದಲ್ಲಿ ಬಿದ್ದರು. ಮಡಿವಾಳನು ಮನುಷ್ಯನಲ್ಲೆಂದು ಪಂಡಿತರಿಗೆ ನಂಬಿಗೆಯಾಯಿತು.

ಈ ವೇರೆಗೆ ಮಡಿವಾಳನ ಒಂದೊಂದೇ ಲೀಲೆಗಳು ಜನರನ್ನು ದಂಗುಬಡಿಸತೊಡಗಿದವು. ಬಾಲ್ಯದಲ್ಲಿಯೇ ಇಷ್ಟು ಅದ್ಭುತವನ್ನು ತೋರಿಸುವ ಇವನು

ದೊಡ್ಡವನಾದಬಳಿಕ ಏನು ಮಾಡುವನೋ ಎಂದು ಜನರು ತಮ್ಮತಮ್ಮೊಳಗೆ ಮಾತನಾಡಿಕೊಳ್ಳುತ್ತಿದ್ದರು. ಕೆಲವು ವೃದ್ಧರು ಈ ಬಾಲಕನು ದೊಡ್ಡವನಾ ದದ್ದನ್ನು ಹ್ಯಾಗೆ ಕಂಡೇವು? ಎಂದೂ, ಸ್ತ್ರೀಯರು ಮಕ್ಕಳಿದ್ದರೆ ಮಡಿವಾಳನಂಥ ಮಕ್ಕಳಿರಬೇಕೆಂದೂ ಹಾರೈಸುತ್ತಿದ್ದರು. ಮಡಿವಾಳನು ತೊದಲ್ನುಡಿಗ ಳಿಂದಲೂ, ಹಣೆಯಲ್ಲಿ ಒಪ್ಪುವ ಅರಳೆಲೆಯಿಂದಲೂ, ಸುಮನೋಹರನಾಗಿ ತೋರುತ್ತ ಕಿತ್ತೂರ ನಿವಾಸಿಗಳನ್ನು ಆನಂದಸಾಗರದಲ್ಲಿ ಲೀನವಾಗ ಮಾಡಿ ದನು! ಈಶ್ವರೀ ವಿಭೂತಿಗಳು ಯಾವಪರಿಸ್ಥಿತಿಯಲ್ಲಿ ಯಾವಅವಸ್ಥೆಯಲ್ಲಿ ಜನಪ್ರಿ ಯವಾಗಲಿಕ್ಕಿಲ್ಲ?

---

೩ನೇಯ ಪ್ರಕರಣ.

—o:೫(o)೫:o—

## ವಿದ್ಯಾಭ್ಯಾಸ.



ಡಿವಾಳಪ್ಪನು ಐದುವರ್ಷದವನಾಗಲು, ಅವನಿಗೆ ಶಾಸ್ತ್ರೋಕ್ತ ವಾಗಿ ವೀರಶೈವ ದೀಕ್ಷೆಯಾದ ಬಳಿಕ ಅಕ್ಷರಾಭ್ಯಾಸವು ಪ್ರಾ ರಂಭಿಸಲ್ಪಟ್ಟಿತು. ಆ ಕಾಲದಲ್ಲಿ ಪ್ರಸಿದ್ಧ ವಿದ್ವಾಂಸರಾದ ಕೊಳ್ಳಿ ರಂಗಾಚಾರ್ಯರೂ, ಹಾನಗಲ್ಲ ಚನ್ನಬಸವ ಶಾಸ್ತ್ರಿಗಳೂ ಮಡಿವಾಳಪ್ಪನ ಗುರುಗಳಾದರು. ಈ ಉಭಯ ಗುರುಗಳಲ್ಲಿ ಮಡಿವಾಳನ ವಿದ್ಯಾಭ್ಯಾಸವು ಬಹು ಕೌತುಕದಿಂದ ಸಾಗಿತು. ಮಡಿವಾಳನ ಚುರುಕುಬುದ್ಧಿಯನ್ನು ನೋಡಿ, ಅಧ್ಯಾಪಕರಿಗೆ ಬಹು ಆನಂದವಾಗುತ್ತಿತ್ತು. ಮಡಿವಾಳನು ಗುರುಗಳು ಹೇಳಿದ್ದನ್ನೆಲ್ಲ ತಟ್ಟನೆ ಕಲಿತು ಬಿಡುತ್ತಿದ್ದನು. ವಿದ್ಯಾಭ್ಯಾಸ ನಡೆದಾಗ ಮಡಿವಾಳಪ್ಪನು ಬಾಲಿಶತನವನ್ನು ಬಿಟ್ಟು ಪ್ರೌಢನಂತೆ ತೋರುತ್ತಿದ್ದನು. ಗುರುಗಳಲ್ಲಿ ಆತನ ನಿಷ್ಠೆ ಬಹಳ; ಗುರುಗಳು ಹೇಳಿದ್ದನ್ನು ಆತನು ಎಂದೂ ಮೀರುತ್ತಿದ್ದಿಲ್ಲ. ಗುರುಗಳುತನಗೆ ಏನಾದರೊಂದು ಕೆಲಸ ಹೇಳಿದರೆ ತಾನು ಧನ್ಯನೆಂದು ತಿಳಿಯುತ್ತಿದ್ದನು. ಕೇವಲ ೭|೮ ವರ್ಷದ ಬಾಲಕನು ಗುರುಗಳಲ್ಲಿ ಇಷ್ಟು ನಿಷ್ಠೆಯನ್ನು ಇಟ್ಟಿದ್ದನ್ನು ನೋಡಿ, ಪ್ರಭುಸ್ವಾಮಿಗಳಿಗೆ ಬಲು ಸಂತೋಷವಾಗುತ್ತಿತ್ತು. ಪ್ರೇಮವು ವಿದ್ಯೆಯ ವಿನಿಮಯದ ದೊಡ್ಡಸಾಧನವೆಂಬದನ್ನು ತೋರಿಸಿಕೊಡುವದಕ್ಕಾ

ಗಿಯೋ ಎಂಬಂತೆ ಮಡಿವಾಳನು ಗುರುಗಳಲ್ಲಿ ಅಕೃತ್ರಿಮ ಪ್ರೇಮವನ್ನು ಮಾಡುತ್ತಿದ್ದನು.

ಸ್ವಲ್ಪ ದಿವಸಗಳಲ್ಲಿಯೇ ಮಡಿವಾಳನು ಸಂಸ್ಕೃತ ವಿದ್ಯೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದನು; ಮರಾಠಿ, ಕನ್ನಡ, ತೆಲಗು, ಭಾಷೆಗಳಲ್ಲಿಯೂ ನೈಪುಣ್ಯತೆಯನ್ನು ಸಂಪಾದಿಸಿದನು. ಕುದುರೆ, ಆನೆಗಳ ಏರಾಟವನ್ನು ಕಲಿತನು. ಯುದ್ಧಕಲೆಯನ್ನೂ ಸ್ವಲ್ಪ ಮಟ್ಟಿಗೆ ಪರಿಚಯ ಮಾಡಿಕೊಂಡನು. ಮಲ್ಲಯುದ್ಧದ ರಹಸ್ಯವನ್ನು ತಿಳಕೊಂಡನು. ಸಾಧಾರಣವಾಗಿ ಆ ಕಾಲದಲ್ಲಿ ಸಮಾಜದೊಳಗೆ ರೂಢವಿದ್ದ ಎಲ್ಲತರದ ವಿದ್ಯೆಗಳನ್ನು ಮಡಿವಾಳಪ್ಪನು ಕಲಿತನೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಇಷ್ಟೊತ್ತಿಗೆ ಮಡಿವಾಳನಿಗೆ ೧೨ ವರ್ಷಗಳು ತುಂಬುತ್ತ ಬಂದಿದ್ದವು. ಆಗ ಅವನಿಗೆ ಈ ವಿದ್ಯೆಗಳಿಂದ ಸಮಾಧಾನವು ಸಿಗದೆ, ಯೋಗಾಭ್ಯಾಸ ಮಾಡಬೇಕೆಂಬ ಸದಿಚ್ಛೆಯು ಆತನ ಮನಸ್ಸಿನಲ್ಲಿ ಹುಟ್ಟಿತು. ಮಹಾತ್ಮನೂ ಅಲೌಕಿಕನೂ ಆದ ಮಡಿವಾಳಪ್ಪನಿಗೆ ಈ ಯೋಗವಿದ್ಯೆಯಲ್ಲಿ ಅಭಿಲಾಷೆಯುಂಟಾದದ್ದು ಆಶ್ಚರ್ಯವಲ್ಲ. ಆತನು ಕೂಡಲೆ ತನ್ನ ವಿಚಾರಗಳನ್ನು ಪ್ರಭುಸ್ವಾಮಿಗಳಿಗೆ ತಿಳಿಸಿ, ಕಾಶಿಗೆ ಹೋಗಲಿಕ್ಕೆ ಅಪ್ಪಣೆ ಕೊಡಬೇಕೆಂದು ಕೇಳಿಕೊಂಡನು. ಆದರೆ ಮಡಿವಾಳನ ವಿಯೋಗವನ್ನು ಸಹನ ಮಾಡದ ಪ್ರಭುಸ್ವಾಮಿಗಳು ಆತನಿಗೆ ಕಾಶಿಗೆ ಹೋಗಲಿಕ್ಕೆ ಅಪ್ಪಣೆ ಕೊಡದಾದರು. ಆಗ ಮಡಿವಾಳನು ಪ್ರಭುಸ್ವಾಮಿಗಳಿಗೆ ಪರಿಪರಿಯಾಗಿ ಹೇಳಿಕೊಂಡನು. ಅವನ ಉತ್ಕಟೇಚ್ಛೆಯನ್ನೂ ಮಾತಿನ ಕೌಶಲ್ಯವನ್ನೂ ತಿಳಿದು, ಪ್ರಭುಸ್ವಾಮಿಗಳು ವಿಯೋಗದುಃಖವನ್ನು ಹ್ಯಾಗಾದರೂ ಸಹನಮಾಡಿಕೊಂಡು ಮಡಿವಾಳನಿಗೆ ಕಾಶಿಗೆ ಹೋಗಲಿಕ್ಕೆ ಅಪ್ಪಣೆಕೊಟ್ಟರು. ಆಗ ಮಡಿವಾಳನಿಗೆ ಆದ ಆನಂದವನ್ನು ವರ್ಣಿಸಲಾಸಲ್ಲ; ಆ ಧಿಟ್ಟನು ಪ್ರಭುಸ್ವಾಮಿಗಳಿಗೆ ಪೊಡಮಟ್ಟು ನಾಗಲಾಂಬಿಕೆಯ ಆಶೀರ್ವಾದವನ್ನು ಹೊಂದಿ, ಗುರುಗಳಿಗೆ ತಲೆವಾಗಿ, ಪ್ರಯಾಣಸನ್ನಾಹದೊಡನೆ ಕಾಶಿಗೆ ಹೊರಟನು. ಪ್ರಿಯವಾಚಕರೇ, ನೋಡಿದಿರಾ ನಮ್ಮ ಮಡಿವಾಳಪ್ಪನ ವಿದ್ಯಾಲಾಲಸೆಯನ್ನು! ೧೨ ವರ್ಷದ ಹುಡುಗನು ಬಹುದೂರದಲ್ಲಿರುವ ಕಾಶೀಪಟ್ಟಣಕ್ಕೆ ಒಬ್ಬನೇ ಹೋಗುವದೆಂದರೆ ಎಂಥಸಾಹಸವಿದು! ಈಗಿನ ನಮ್ಮ ವಿದ್ಯಾರ್ಥಿಗಳಲ್ಲಿ ಯಾರಾದರೂ ಹೊರಡಬಹುದೋ? ದೇಶಕಾಲಮಾನ ನೋಡಿ ಮಕ್ಕಳಿಗೆ ಸಾಹಸಿಗತನವನ್ನು ಕಲಿಸುವದು. ಪ್ರತಿಯೊಬ್ಬ ತಂದೆತಾಯಿಗಳ ಕರ್ತವ್ಯವಾಗಿರುವದು. ಇರಲಿ

ಸಾಹಸಮಾಡಿದ ಹೊರತುಯಾವ ವ್ಯಕ್ತಿಯಾಗಲಿ, ದೇಶವಾಗಲಿ, ರಾಷ್ಟ್ರವಾಗಲಿ ಮುಂದೆ ಬರಲಾರದೆಂಬದನ್ನು ಮಡಿವಾಳಪ್ಪನು ತನ್ನ ಆಚರಣೆಯಿಂದ ತೋರಿಸಿಕೊಟ್ಟನೆಂದು ಹೇಳಬಹುದು. ಈಗಿನಂತೆ ಆ ಕಾಲದಲ್ಲಿ ಉಗಿಬಂಡಿ, ಮೋಟಾರುಮೊದಲಾದ ಪ್ರಯಾಣದ ಸಾಧನಗಳು ಇದ್ದಿಲ್ಲ; ಕಾಲುನಡಿಗೆಯಿಂದಲೇನಮ್ಮ ಮಡಿವಾಳಪ್ಪನು ಪ್ರಯಾಣ ಮಾಡಬೇಕಾಗಿತ್ತು. ಆ ವೀರನು ಮಾರ್ಗಾಯಾಸವನ್ನು ಸಹಿಸಲಿಕ್ಕೆ ಗಟ್ಟಿಯಾಗಿ, ಪಯಣದ ಮೇಲೆ ಪಯಣಮಾಡುತ್ತ ಹಾದಿಯಲ್ಲಿ ಒದಗಿದ ಮಹಾಮಹಾ ವಿಪತ್ತುಗಳನ್ನು ಅನುಭವಿಸುತ್ತ ಒಮ್ಮೆ ಕಾಶಿಗೆ ಮುಟ್ಟಿದನು. ಈ ದೀರ್ಘಪ್ರವಾಸದಿಂದ ಮಡಿವಾಳಪ್ಪನ ದೇಹಸ್ಥಿತಿಯುಕೆಟ್ಟಿತು. ಆದರೂ ಆತನು ಅದನ್ನು ಲೆಕ್ಕಿಸದೆ, ಕಾಶಿಯಲ್ಲಿ ಸದ್ಗುರುವನ್ನು ಹುಡುಕಹತ್ತಿದನು. ಆ ಪವಿತ್ರಕ್ಷೇತ್ರದರ್ಶನದಿಂದ ಮಡಿವಾಳಪ್ಪನಲ್ಲಿ ಅತಿಶಯವಾದ ಭಕ್ತಿರಸದ ಸಂಚಾರವಾಯಿತು. ಆತನು ಶ್ರೀವಿಶ್ವೇಶ್ವರನ ದರ್ಶನವನ್ನುತಕ್ಕೊಂಡು ಒಮ್ಮೆ ಕಾಶೀಪಟ್ಟಣವನ್ನೆಲ್ಲ ಸಮಗ್ರವಾಗಿ ಅಡ್ಡಾಡಿ ನೋಡಿದನು. ಸುದೈವದಿಂದ ನಮ್ಮ ಮಡಿವಾಳಪ್ಪನಿಗೆ ಅಲ್ಲಿಯೋಗ್ಯವಾದ ಒಬ್ಬ ಗುರುವುಸಿಕ್ಕನು. ಪರಮವೈರಾಗ್ಯಶಾಲಿಯಾದ ಸದ್ಗುರವು ದೊರೆತದ್ದಕ್ಕೆ ಮಡಿವಾಳನು ಆನಂದಬಟ್ಟು ಸದ್ಗುರುಸೇವಾತತ್ಪರನಾಗಿ, ಗುರುಮುಖದಿಂದ ಯೋಗವನ್ನು ಅಭ್ಯಾಸಿಸಲುಪಕ್ರಮಿಸಿದನು. ಹೀಗೆ ಮಡಿವಾಳಪ್ಪನು ಏಕನಿಷ್ಠೆಯಿಂದ ಗುರುಸೇವೆಯನ್ನುಮಾಡಿ, ಯೋಗದಂಥಗಹನವಿದ್ಯೆಯುನ್ನು ಮನನಮಾಡಿಕೊಂಡನು. ಸ್ವಲ್ಪ ದಿವಸಗಳಲ್ಲಿಯೇ ಗುರುಗಳ ಅನುಗ್ರಹವು ಅವನ ಮೇಲೆ ಪೂರ್ಣವಾಗಿ ಆಯಿತು. ಮಡಿವಾಳಪ್ಪನು ಯೋಗ ಸಾಮರ್ಥ್ಯದಿಂದ ದೇದೀಪ್ಯಮಾನನಾಗಿ ತೋರಹತ್ತಿದನು. ಕಷ್ಟಾಳುವೂ ಸಾಹಸಿಯೂ ಆದವನಿಗೆ ಯಾವದು ತಾನೇಅಸಾಧ್ಯವು.



೩ ನೇಯ ಪ್ರಕರಣ.

## ಪ್ರಭುಸ್ವಾಮಿಗಳ ದೇಹವಿಸರ್ಜನವೂ— ಮಡಿವಾಳಪ್ಪನ ಮಠಾಧಿಕಾರವೂ.



ಈ ಮೇರೆಗೆ ಮಡಿವಾಳಪ್ಪನು ಪ್ರಬುದ್ಧನಾಗುವವರೆಗೆ ಕಾಶಿಯಲ್ಲಿದ್ದು ಯೋಗಾಭ್ಯಾಸವನ್ನು ಪೂರ್ಣವಾಗಿ ಮುಗಿಸಿಕೊಂಡು, ಕಿತ್ತೂರಿಗೆ ಹೊರಟನು. ಅವನು ಹಾದಿಯಲ್ಲಿ ಭಿಕ್ಷಾನ್ನದಿಂದ ಜೀವಿಸುತ್ತ ಪಯಣದಮೇಲೆ ಪಯಣಮಾಡಿ, ಕಿತ್ತೂರಿಗೆ ಬಂದು ಮುಟ್ಟಿದನು. ವಿದ್ಯಾತೇಜಸ್ಸಿನಿಂದ ಒಪ್ಪುವ ಮಡಿವಾಳನನ್ನು ನೋಡಿ ಪ್ರಭುಸ್ವಾಮಿಗಳಿಗೆ ಹಿಡಿಸಲಾರದಷ್ಟು ಆನಂದವಾಯಿತು. ಅವರು ಆತನನ್ನು ಅಪ್ಪಿಕೊಂಡು—ಬಾಳಾ, ಮಡಿವಾಳಾ, ನಾನು ಬದುಕಿ ಇರುವದರೊಳಗೆ ತಿರುಗಿ ಬಂದೆಯಾ! ಬಹಳ ನೆಟ್ಟಗಾಯಿತು. ಇಷ್ಟು ದಿವಸಗಳವರೆಗೆ ದುಸ್ಸಹವಾದ ನಿನ್ನ ವಿಯೋಗ ದುಃಖವು ನನ್ನನ್ನು ಬಾಧಿಸುತಲಿತ್ತು. ನನ್ನ ಕಣ್ಣುಗಳೆಲ್ಲ ಕಾಶಿಯ ಕಡೆಗೇ ಇದ್ದವು; ಎಂದು ನುಡಿದು ತಮ್ಮ ವಾತ್ಸಲ್ಯವನ್ನು ಪ್ರಕಟಗೊಳಿಸಿದರು. ತನ್ನ ಮೇಲೆ ಇದ್ದ ಪ್ರಭುಸ್ವಾಮಿಯ ಅಪಾರ ಪ್ರೇಮವನ್ನು ನೋಡಿ, ಮಡಿವಾಳಪ್ಪನಿಗೂ ಪರಮಾನಂದವಾಯಿತು.

ಹೀಗಿರಲು, ಒಂದು ದಿನ ಪ್ರಭುಸ್ವಾಮಿಗಳು ಮಡಿವಾಳನನ್ನು ತಮ್ಮ ಹತ್ತರ ಕರೆದು--ಅಪ್ಪಾ ಮಡಿವಾಳಾ, ನನ್ನ ಇಹಲೋಕದ ಯಾತ್ರೆಯು ಮುಗಿಯಿತು. ಇನ್ನು ನಾನು ನಿಶ್ಚಯವಾಗಿ ಬಹಳ ದಿವಸ ಬದುಕಲಾರೆನು. ನನ್ನ ಆಯುಮರ್ಯಾದೆಯು ತೀರಿತು. ನೀನು ಹ್ಯಾಗಿದ್ದರೂ ವಿದ್ಯಾವಂತನಾಗಿರುವೆ, ಧರ್ಮಾಧರ್ಮಗಳು ನಿನಗೆ ಚನ್ನಾಗಿ ತಿಳಿಯುತ್ತವೆ. ಸಜ್ಜನರ ಧರ್ಮಗಳು ನಿನ್ನಲ್ಲಿ ಪೂರ್ಣವಾಗಿ ಕಂಡು ಬರುತ್ತವೆ. ಇಂಥ ನಿನ್ನನ್ನು ನೋಡಿ ಪರಮಾಹ್ಲಾದವಾಗುತ್ತದೆ. ನಾನು ಶಿವನಲ್ಲಿ ವರವನ್ನು ಬೇಡಿದ್ದು ಸಾರ್ಥಕ್ಯವಾಯಿತು ನಿನ್ನಂಥ ಮಹಾನುಭಾವನೇ ನಮ್ಮ ಮಠಕ್ಕೆ ಅಧಿಪತಿಯಾಗಬೇಕೆಂದು ನನ್ನ ಮನೋಭಿಲಾಷೆಯಿತ್ತು. ಅದು ಪೂರ್ಣವಾದಂತಾಯಿತು; ಇಗೋ, ಈ ಚರಪಟ್ಟಾಧ್ಯಕ್ಷತೆಯನ್ನು ಸ್ವೀಕರಿಸು! ಅಪ್ಪಾ ಶಿಷ್ಯನೇ, ಧರ್ಮಗುರುತ್ವವು ಬಲು ಕಠಿಣವಾಗಿರುವದು. ಕಂಡೆಯಾ! ಶಿಷ್ಯಸಂವಾದಕ್ಕೂ ಭಕ್ತಸಂವಾದಕ್ಕೂ ಸದ್ಬೋಧ

ವನ್ನು ಮಾಡಿ ಅವರನ್ನು ಒಳ್ಳೇಮಾರ್ಗಕ್ಕೆ ಒಯ್ಯುವ ದೊಡ್ಡ ಕೆಲಸವು ಧರ್ಮಗುರುವಿನಮೇಲೆ ಬಿದ್ದಿರುವದು. ಇದನ್ನು ನಂಬಾಳಿಸಿಕೊಂಡು ನಮ್ಮ ಮಠದ ಕೀರ್ತಿಯನ್ನು ಸಂರಕ್ಷಿಸು; ಎಂದು ಬೋಧಮಾಡಿದರು. ಪ್ರಭುಸ್ವಾಮಿಗಳ ಪರಮಾನುಗ್ರಹದಿಂದ ಮಡಿವಾಳಪ್ಪನು ಪಟ್ಟ ಚರಮೂರ್ತಿಯಾದನು. ಧರ್ಮಗುರುತ್ವವು ಆ ಮಹಾತ್ಮನಿಗೆ ಪರಿಶೋಭಿಸಿತು. ಪ್ರಭುಸ್ವಾಮಿಗಳು ತಮ್ಮ ಜಡದೇಹವನ್ನು ಪರಿತ್ಯಜಿಸಿ, ನಿಜಾನಂದದಲ್ಲಿ ಐಕ್ಯರಾದರು!

ಬಳಿಕ ಮಡಿವಾಳಸ್ವಾಮಿಗಳು ಪ್ರಭುಸ್ವಾಮಿಯ ಅಂತ್ಯವಿಧಿಯನ್ನು ಭಕ್ತಿಪೂರ್ವಕವಾಗಿ ಸಾಂಗಗೊಳಿಸಿ, ಕಲ್ಮಠದ ವ್ಯವಸ್ಥೆಯನ್ನು ನೋಡುತ್ತ ಇರತೊಡಗಿದರು. ವಿದ್ಯಾವಂತರೂ, ನಿಸ್ಪೃಹಿಗಳೂ, ಆದ ಮಡಿವಾಳಸ್ವಾಮಿಯುವರು ಸ್ವಲ್ಪದಿವಸಗಳಲ್ಲಿಯೇ ಜನಪ್ರಿಯರಾದರು. ಮಡಿವಾಳ ಸ್ವಾಮಿಯ ಮುಖದಿಂದ ಧರ್ಮ ಬೋಧವನ್ನು ಕೇಳಿ ಜನರು ತಲೆದೂಗುತ್ತಿದ್ದರು. ಕಿತ್ತೂರು ಮಲ್ಲಸರ್ಜದೇಸಾಯಿಯ ಸಂಸ್ಥಾನವಾದ್ದರಿಂದ ಅಲ್ಲಿ ವರ್ಷಕ್ಕೊಮ್ಮೆ ಶರ್ಯತ್ತಿನ ನಿಮಿತ್ತವಾಗಿ ಬಿಲ್ಲ ಪಾಳೆಗಾರರು ಕೂಡುತ್ತಿದ್ದರು. ಆಗ ಆ ಪಾಳೆಗಾರರು ಕಲ್ಮಠಕ್ಕೆ ಬಂದು ಮಡಿವಾಳಸ್ವಾಮಿಗಳ ದರ್ಶನ ತಕ್ಕೊಂಡು ಅವರನ್ನು ಬಹುವಿಧವಾಗಿ ಶ್ಲಾಘಿಸುತ್ತಿದ್ದರು. ಮಡಿವಾಳಸ್ವಾಮಿಗಳು ತಮ್ಮ ಮಠದಲ್ಲಿ ಅವಿಚ್ಛಿನ್ನವಾಗಿ ಅನ್ನದಾನವನ್ನು ನಡಿಸಿದರು. ಅತಿಥಿಗಳು ಅತಿ ಆನಂದದಿಂದ ಸತ್ಕರಿಸಲ್ಪಡುತ್ತಿದ್ದರು.

ಮಡಿವಾಳ ಸ್ವಾಮಿಯ ಸ್ವಭಾವವು ಅತಿಶಯ ತಾಪಟವಿದ್ದದ್ದರಿಂದ ಅನೀತಿಯು ಅವರಿಗೆ ಸೇರುತ್ತಿರಲಿಲ್ಲ. ಆದ್ದರಿಂದ ಮಠದಲ್ಲಿ ಅಂಥ ಇಂಥವರು ಬರಲಿಕ್ಕೆ ಅಂಜುತ್ತಿದರು. ವಿರಕ್ತಮಠವೆಂಬ ನಾಮಸಾರ್ಥಕ್ಯವಾಗವಾಡಲು, ಯಾವಾಗಲೂ ಅಲ್ಲಿ ವೈರಾಗ್ಯ ಪರಸಂಗತಿಗಳ ಚರ್ಚೆಯೇ ನಡಿಯುತ್ತಿತ್ತಲ್ಲದೆ ಸಾಂಸಾರಿಕರ ಹಾಳು ರಗಳೆಗಳು ಅಲ್ಲಿ ನಡೆಯುತ್ತಿರಲಿಲ್ಲ. ಹೀಗೆ ಮಡಿವಾಳಸ್ವಾಮಿಯುವರ ದರ್ಶವು ಮಠದಲ್ಲಿ ವಿಶೇಷವಾಗಿ ಕೂತು, ಆ ಮಠವು ಅತಿಥಿಗಳ ಅನ್ನಸತ್ರವೂ, ವಿದ್ಯಾರ್ಥಿಗಳಿಗೆ ವಿದ್ಯಾಮಂದಿರವೂ, ಸಂಸಾರತಾಪದಿಂದ ಬಳಲಿದವರಿಗೆ ಸದ್ಬೋಧಾಮೃತದ ನಿಲಯವೂ ಆಗಿ, ಸತ್ಕರ್ಮಾಭಿವೃದ್ಧಿಯ ಪವಿತ್ರಸ್ಥಳವೆನಿಸಿತು.

ಈ ರೀತಿಯಾಗಿ ಮಡಿವಾಳಸ್ವಾಮಿಗಳು ಲೋಕಕ್ಕೆ ಸನ್ಮಾರ್ಗದರ್ಶಕರಾಗಿ ಇರುತ್ತಿರಲು, ಅವರಿಂದ ಒಂದೊಂದೇ ಲೀಲೆಗಳು ಸಹಜವಾಗಿ ಆಗತೊ

ಡಗಿದವು. ಸತ್ಪುರುಷರು ತಮ್ಮ ಸಾಮರ್ಥ್ಯವನ್ನು ಎಷ್ಟು ಹುದುಗಿಸಿಕೊಳ್ಳುತ್ತಿದ್ದರೂ ಅದು ಪ್ರಸಂಗವಿಶೇಷದಲ್ಲಿ ಬೈಲಿಗೆ ಬೀಳದೆ ನಿಲ್ಲುವದಿಲ್ಲ; ಒಮ್ಮೆ ಮಲ್ಲಸರ್ಜ ದೇಸಾಯಿಯ ಮಗನಾದ ಬಾಪೂಸಾಹೇಬನು ಒಂದುದೊಡ್ಡ ಗಣಾರಾಧನೆಯನ್ನು ಮಾಡಿದನು. ಆಗ ಮಡಿವಾಳ ಸ್ವಾಮಿಗಳು ಬಾಪೂಸಾಹೇಬನಿಂದ ಪ್ರಾರ್ಥಿತರಾಗಿ ಅರಮನೆಗೆ ಬಿನ್ನಣಕ್ಕೆ ನಡೆದರು. ಬಾಪೂಸಾಹೇಬನೂ ಮಡಿವಾಳ ಸ್ವಾಮಿಗಳೂ ಚಿಕ್ಕಂದಿನಲ್ಲಿ ಕೂಡಿ ಆಡಿದವರು; ಆದರೂ ಬಾಪೂಸಾಹೇಬನು ದುರ್ಜನರ ಸವಿಮಾತಿಗೆ ಕಿವಿಗೊಟ್ಟು ಮಡಿವಾಳ ಸ್ವಾಮಿಗಳನ್ನು ಅಂತರಂಗದಲ್ಲಿ ಪ್ರೀತಿಸುತ್ತಿರಲಿಲ್ಲ, ಲೋಕಲಜ್ಜೆಗಾಗಿ ಮಾತ್ರ ಬಾಪೂಸಾಹೇಬನು ಮಡಿವಾಳ ಸ್ವಾಮಿಗಳಿಗೆ ನಡಕೊಳ್ಳುತ್ತಿದ್ದನು. ಇರಲಿ; ಇಂದು ಮಡಿವಾಳ ಸ್ವಾಮಿಗಳು ಬಾಪೂಸಾಹೇಬನ ಮನೆಯಲ್ಲಿ ಬಿನ್ನಣಕ್ಕೆ ಬಂದರು. ಬಹು ಸಮಾರಂಭವು ನಡೆದಿತ್ತು. ಆಗ ಬಾಪೂಸಾಹೇಬನು ಪಟ್ಟಚರಮೂರ್ತಿಗಳಾದ ಮಡಿವಾಳ ಸ್ವಾಮಿಗಳನ್ನು ಕೋಮಲವಾದ ಬಾಳೆಯ ಎಲೆಯ ಗದ್ದುಗೆಯಮೇಲೆ ಕುಳ್ಳಿರಿಸಿ ಪೂಜಿಸಿದನು. ಬಳಿಕ ಕರುಣ- ತೀರ್ಥ- ಪಾದೋದಕ- ಪ್ರಸಾದವನ್ನು ಭಕ್ತಮಾಹೇಶ್ವರರು ಕೂಡಿ ಸೇವನ ಮಾಡಿದರು. ಅನಂತರ ತೊತ್ತುಗಳು ಎಡೆಗಳನ್ನು ಸಿದ್ಧಪಡಿಸಿದರು. ಎಲ್ಲರೂ ಯಥಾಸಾಂಗವಾಗಿ ಊಟಮಾಡಿದರು. ಬಳಿಕ ಜಂಗಮರಿಗೆ ಭಿಕ್ಷೆಯು ಕೊಡಲ್ಪಟ್ಟಿತು. ಎಲ್ಲರೂ ಬಾಪೂಸಾಹೇಬನ ಅಪ್ಪಣೆಪಡೆದು ಮನೆಗೆ ಹೋದರು. ಮಡಿವಾಳಸ್ವಾಮಿಗಳು ತಮ್ಮ ಗದ್ದುಗೆಯನ್ನು ಬಿಟ್ಟು ಎದ್ದರು. ಚಮತ್ಕಾರವೇನಂದರೆ—ಮಡಿವಾಳ ಸ್ವಾಮಿಗಳು ಕುಳಿತ ಗದ್ದುಗೆಯು, ಕೋಮಲವಾದ ಬಾಳೆಯ ಎಲೆಯದಿತ್ತಷ್ಟೇ; ಅದು ಮಡಿವಾಳಸ್ವಾಮಿಗಳು ಕುಳಿತದ್ದರಿಂದ ಏನೂ ಅಚ್ಚಳಿದಿದ್ದಿಲ್ಲ; ಎಳೇಬಾಳೇ ಎಲೆಯು, ಮೇಲೆ ಮನುಷ್ಯನು ೩ತಾಸು ಕುಳಿತಿದ್ದರೂ ಅಚ್ಚಳಿಯದೆ ಇದ್ದದ್ದನ್ನು ಕಂಡು, ಅಲ್ಲಿಯ ತೊತ್ತುಗಳಿಗೆ ಪರಮಾಶ್ಚರ್ಯವಾಗಿ, ಅವರು ಅಲ್ಲಿದ್ದವರಿಗೆಲ್ಲ ಈ ಸಂಗತಿಯನ್ನು ಹೇಳಿದರು. ಎಲ್ಲರೂ ಈ ಚಮತ್ಕಾರವನ್ನು ನೋಡಬಂದರು. ಬಾಪೂಸಾಹೇಬನೂ ನೋಡಿದನು. ಜನರಿಗೆ ಆಶ್ಚರ್ಯವೆನಿಸಿತು. ಪ್ರತಿಯೊಬ್ಬನೂ ಮಡಿವಾಳಪ್ಪನಲ್ಲಿ ಪೂಜ್ಯಬುದ್ಧಿಯನ್ನು ತಾಳಿದನು. ಬಾಪೂಸಾಹೇಬನು ಈ ಚಮತ್ಕಾರವನ್ನು ನೋಡಿಮನಸ್ಸಿನಲ್ಲಿ ಭಯಪಟ್ಟನು. ಮಡಿವಾಳಸ್ವಾಮಿಗಳ ಯೋಗ್ಯತೆಯು ದೊಡ್ಡದಿರುವದು; ನಾನು ಸುಮ್ಮನೆ ಅವರನ್ನು ನಿಂದಿಸಿ, ನನ್ನ ಹಾನಿಯನ್ನು ನಾನೇ

ಮಾಡಿಕೊಳ್ಳಬಾರದೆಂದು ಅವನಿಗೆ ಆಗ ಅನಿಸಿತು. ಆದರೆ ದುರ್ಜನರ ಮನಸ್ಸು ಕೌತುಕದಲ್ಲಿ ಮುಣುಗುವದು ಎಷ್ಟು ಹೊತ್ತು? ಒಂದುಕ್ಷಣ? ಉತ್ತರಕ್ಷಣ ದಲ್ಲಿ ಪುನಃ ಅವರ ಮನಸ್ಸು ಸ್ವಾಪ್ನಪ್ರೇಕ್ಷಣ ಮಾಡಿದಂತೆ ಆಗುವದು. ಅದರಂತೆ ಬಾಪೂಸಾಹೇಬನಿಗೂ ಆಯಿತು. ಮುಡಿವಾಳಸ್ವಾಮಿಗಳು ತಮ್ಮ ಅಧಿಕಾರಾನುಸಾರವಾಗಿ ಮನ್ನಣೆಯನ್ನು ಹೊಂದಿ ಕಲ್ಮಠಕ್ಕೆ ತೆರಳಿ, ಭಕ್ತರಿಗೆ ಧರ್ಮೋಪದೇಶವನ್ನು ಮಾಡುತ್ತ ಎಂದಿನಂತೆ ಇರಹೊಡಗಿದರು.

---

ಐನೇಯ ಪ್ರಕರಣ.

—೦:೦(೦):೦—

# ದುರ್ಜನರ ಮರಾಲೋಚನೆ.




ವಕಾಲದಲ್ಲಾಗಲಿ ದುರ್ಜನರು ಇದ್ದೇ ಇರುವರು. ಸೃಷ್ಟಿಯು ಹುಟ್ಟಿದಾಗಲೆ ಬ್ರಹ್ಮದೇವನು ಸಜ್ಜನರನ್ನೂ ದುರ್ಜನರನ್ನೂ ಗಂಟಿಕ್ಕಿಯೇ ಕಳಿಸಿಕೊಟ್ಟಿದ್ದಾನೆ. ದುರ್ಜನರ ಕುಚೇಷ್ಟೆಯ ಯೋಗದಿಂದ ಸಜ್ಜನರ ಸತ್ವವು ಪ್ರಕಟವಾಗಬೇಕೆಂದು ಭಗವಂತನ ಉದ್ದೇಶವಿದ್ದಂತೆ ತೋರುತ್ತದೆ. ಅದರಂತೆ ನಮ್ಮ ಮುಡಿವಾಳ ಸ್ವಾಮಿಗಳ ಮೇಲಾದರೂ ದುರ್ಜನರ ಕೃಪಾಕಟಾಕ್ಷವು ಪೂರ್ಣವಾಗಿ ಕೂತಿತ್ತು! ಅವರಿಗೆ ಮುಡಿವಾಳಪ್ಪನವರ ದಿವ್ಯತೇಜಸ್ಸು ಸಹನವಾಗಲಿಲ್ಲ; ಜಾರಿಣಿಯು ಪತಿವ್ರತೆಯನ್ನು ತಿರಸ್ಕರಿಸುವಂತೆಯೂ ಆಗ ಸರಬಾನಿಯು ಭಾಗೀರಥಿಯನ್ನು ನಿಂದಿಸುವಂತೆಯೂ ಆ ದುರ್ಜನರು ಮುಡಿವಾಳ ಸ್ವಾಮಿಗಳ ಮೇಲೆ ಅವರ ಪರೋಕ್ಷದಲ್ಲಿ ತಮ್ಮವಾಕ್ ಪ್ರಹಾರಗಳನ್ನು ಬಿಡುತ್ತಿದ್ದರು. ಕಿತ್ತೂರ ದೇಸಾಯಿಯಾದ ಬಾಪೂಸಾಹೇಬನಿಗೆ ಇಲ್ಲದ್ದೊಂದು ಕಲಿಸಿ ಅವನ ಮನಸ್ಸನ್ನು ಮುಡಿವಾಳಸ್ವಾಮಿಗಳ ವಿಷಯವಾಗಿ ಕಲುಷಿತವಾಗಮಾಡಿದ್ದರೆಂದು ಹಿಂದೆ ಹೇಳಿದೆಯಷ್ಟೇ; ಈ ಬಾಪೂಸಾಹೇಬನ ಸಹಾಯದಿಂದ ಮುಡಿವಾಳಪ್ಪನನ್ನು ಮಠದಿಂದ ಹೊರಗೆ ಹಾಕಬೇಕೆಂದು ಆ ದುಷ್ಟರು ಬಯಸಿದರು.

ದುರ್ಜನರಿಗೆ ದುಷ್ಟಾಲೋಚನೆಗಳು ಬಹು ಬೇಗ ಹೊಳೆಯುತ್ತಿರುತ್ತವೆ. ಅವರು ತಮ್ಮ ದುರ್ಬುದ್ಧಿಯಿಂದ ಹಲವು ಹಂಚಿಕೆಗಳನ್ನು ತಟ್ಟನೆ ಕಂಡು

ಹಿಡಿಯುವರು, ಅದರಂತೆ ಕಿತ್ತೂರ ನಿವಾಸಿಗಳಾದ ಆ ಕೆಲವು ದುರ್ಜನರು ಮಡಿವಾಳಪ್ಪನನ್ನು ಕಲ್ಮಠದಿಂದ ಹೊರಗೆ ತಳ್ಳುವ ವಿಷಯವಾಗಿ ಹಲವು ಹಂಚಿಕೆಗಳನ್ನು ಮಾಡಿ ಅವನ್ನು ಬಾಪೂಸಾಹೇಬನ ಮುಂದೆ ಹೇಳುವದಕ್ಕಾಗಿ ವಾಡೆಕ್ಕೆ ಹೊರಟರು. ಮಲ್ಲಸರ್ಜದೇಸಾಯಿಯು ಕಾಲವಾಗಿ, ಬಾಪೂಸಾಹೇಬನಿಗೆ ದೇಸಗತಿಯ ಒಡೆತನವು ಅದೇ ಪ್ರಾಪ್ತವಾಗಿತ್ತು; ತಾರುಣ್ಯದಲ್ಲಿ ಮನುಷ್ಯನಿಗೆ ಮೊದಲೇ ವಿವೇಕವು ಕಡಿಮೆ, ಅದರಲ್ಲಿ ಐಶ್ವರ್ಯವಿದ್ದರಂತೂ ಕೇಳುವದೇನು ಸಾರಾಸಾರ ವಿಚಾರವು ಅವರನ್ನು ಬಿಟ್ಟು ಬಹುದೂರ ಓಡಿ ಹೋಗುವದು. ನಮ್ಮ ನೂತನ ದೇಸಾಯಿಯಾದ ಬಾಪೂಸಾಹೇಬನ ಸ್ಥಿತಿಯೂ ಇದೇಪ್ರಕಾರವಾಗಿತ್ತು; ಅವನು ಇನ್ನೂ ಬಿರಿಕೆಯ ರಕ್ತದ ತರುಣನು; ಮೇಲೆ ದೇಸಗತಿಯ ಅಧಿಕಾರವು; ಇಂಥ ಸಮಯದಲ್ಲಿ ಕುಜನರ ಸವಿಮಾತುಗಳು ಅವನನ್ನು ಮರಳುಮಾಡಹತ್ತಿದ ಬಳಿಕ ಅವನಲ್ಲಿ ವಿವೇಕವು ಎಂತು ನಿಲ್ಲುವದು? ಬಾಪೂಸಾಹೇಬನು ದುರ್ಜನರ ದುರಾಲೋಚನೆಗೆ ಪೂರ್ಣವಾಗಿ ವಶವಾದನು. ಗಂಗೋದಕವನ್ನು ತರಿಸುವ ನಿಮಿತ್ಯದಿಂದ ಮಡಿವಾಳಪ್ಪನನ್ನು ಕಾಶೀಯಾತ್ರೆಗೆ ಕಳುಹಿಸಿ, ಇತ್ತ ಕಲ್ಮಠದ ಪಟ್ಟಕ್ಕೆ ಬೇರೊಬ್ಬ ಚರಮೂರ್ತಿಯನ್ನು ಕುಳ್ಳಿರಿಸಬೇಕೆಂದು ಗೊತ್ತಾಯಿತು. ದುರ್ಜನರು ತಮ್ಮ ಇಚ್ಛೆಯು ಕೈಗೂಡುವದೆಂದು ತರ್ಕಿಸಿ ಸಂತೋಷದಿಂದ ಹೊರಟು ಹೋದರು.

ಮುಂದೆ ಒಂದು ದಿನ ಬಾಪೂಸಾಹೇಬನು ಮಡಿವಾಳಸ್ವಾಮಿಗಳನ್ನು ಕರೆಯಿಸಿ ಅತಿ ವಿನಯದಿಂದ—"ಸ್ವಾಮಿ, ಗುರುಗಳೇ, ತಾವು ಈ ಭಕ್ತನ ಇಚ್ಛೆಗಳನ್ನು ಪೂರ್ಣಮಾಡಲಿಕ್ಕೆ ಸಮರ್ಥರೇ ಇರುವಿರಿ; ನನಗೆ ಭಾಗೀರಥಿಯ ಪುಣ್ಯೋದಕವನ್ನು ತರಿಸುವ ಇಚ್ಛೆಯುಂಟಾಗಿದೆ. ಈ ಪವಿತ್ರ ಕೆಲಸವನ್ನು ನನಗೆ ಯಾರು ಮಾಡಿಕೊಡುವರು? ತಮ್ಮಂಥ ಮಹಾನುಭಾವರಹೊರತು ಅನ್ಯರಿಂದ ಈ ಕಾರ್ಯವನ್ನು ನೆರವೇರಿಸುವದಾಗದು. ಅದರಿಂದ ತಾವೇ ಈ ಭಕ್ತನ ಮೇಲೆ ಅನುಗ್ರಹ ಮಾಡಿ, ಕಾಶಿಗೆ ಹೋಗಿ ಗಂಗೋದಕವನ್ನು ತಕ್ಕೊಂಡು ಬರಬೇಕು. ತಮಗೆ ಹತ್ತಿದಷ್ಟು ದುಡ್ಡನ್ನು ಕೊಡುವೆನು. ಸಂಗಡ ಬೇಕಾದಷ್ಟು ಜನರನ್ನೂ ಕರೆದುಕೊಂಡು ಹೋಗಬಹುದು' ಎಂದು ನುಡಿದನು. ಮಡಿವಾಳಪ್ಪನವರಿಗೆ ತೀರ್ಥಯಾತ್ರೆಗಳ ಹೌಸು ಬಹಳವಿದ್ದದರಿಂದ ಅವರು ಬಾಪೂಸಾಹೇಬನ ಮಾತಿಗೆ ಒಪ್ಪಿಕೊಂಡರು. ಸಂಗಡ ಶಿವಪೂಜೇಮಲ್ಲಪ್ಪನೆಂಬವನು ಹೊರಡಲು ಸಿದ್ಧನಾದನು. ಬಾಪೂಸಾಹೇಬನು ಮಡಿವಾಳಸ್ವಾಮಿಗೆ ಹೇರಳವಾಗಿ

ದ್ರವ್ಯ ಕೊಟ್ಟನು. ಈ ಮೇರೆಗೆ ಮಡಿವಾಳಸ್ವಾಮಿಗಳು ಹೂ! ಅಂದಕೂಡಲೆ ಎಲ್ಲವೂ ಸಿದ್ಧವಾಯಿತು. ಆಗ ಮಡಿವಾಳಪ್ಪನವರು ಒಂದು ಶುಭ ನಕ್ಷತ್ರ ದಲ್ಲಿ ಮಠವನ್ನು ಬಿಟ್ಟು ಕಾಶೀಯಾತ್ರಾರ್ಥವಾಗಿ ನಡೆದರು. ಬಾಪೂಸಾಹೇಬನೂ, ರೈತರೂ ಮಡಿವಾಳಸ್ವಾಮಿಗಳನ್ನು ಊರಹೊರತನಕ ಕಳುಹಿಸಿ ತಿರುಗಿ ಬಂದರು.

ಈ ಮೇರೆಗೆ ಮಡಿವಾಳಸ್ವಾಮಿಗಳು ಕಾಶಿಗೆ ಹೊರಡಲು, ಇತ್ತ ಕಿತ್ತೂರಲ್ಲಿ ದುರ್ಜನರು ಬಹು ಆನಂದ ಪಡಹತ್ತಿದರು. ಸೂರ್ಯನಿಲ್ಲದಾಗ ನಕ್ಷತ್ರಗಳ ಪ್ರತಿಷ್ಠೆಯು ಹೆಚ್ಚಾದಂತೆಯೂ, ಪಂಡಿತನಿಲ್ಲದ ಸಭೆಯಲ್ಲಿ ಪಾಮರಂಡಿಯು ಎದ್ದು ಕುಳಿತಂತೆಯೂ ಕಿತ್ತೂರಲ್ಲಿಯು ದುರ್ಜನರು ಪ್ರತಿಷ್ಠೆಯನ್ನು ಹೊಂದ ಹತ್ತಿದರು. ಅವರು ಬಾಪೂಸಾಹೇಬನ ಕಡೆಗೆ ಹೋಗಿ ಧನಿಯರೇ, ಇನ್ನು ತಡವೇತಕ್ಕೆ? ಕಲ್ಮಠಕ್ಕೆ ಬೇರೊಬ್ಬ ಚರಮೂರ್ತಿಯನ್ನು ಪಟ್ಟಕ್ಕೆ ಕುಳ್ಳಿರಿಸಿರಿ. ನಮ್ಮ ಹಂಚಿಕೆಯು ಚನ್ನಾಗಿ ಸಾಧಿಸಿರುವದು ಎಂದು ನುಡಿದರು. "ವಿನಾಶ ಕಾಲಕ್ಕೆ ವಿಪರೀತ ಬುದ್ಧಿಯು"ಎಂಬಂತೆ ಬಾಪೂಸಾಹೇಬನು ಮೂರ್ಖತನಕ್ಕೆ ಬಿದ್ದು 'ಗುರುಸಿದ್ಧಸ್ವಾಮಿ' ಎಂಬವನನ್ನು ಕಲ್ಮಠಕ್ಕೆ ಅಧಿಕಾರಿಯನ್ನಾಗಿ ಮಾಡಿದನು. ಗುರುಸಿದ್ಧಸ್ವಾಮಿಯು ಪಟ್ಟ ಚರಮೂರ್ತಿಯಾಗಿ ಕಲ್ಮಠದ ಗುರುತ್ವವನ್ನು ವಹಿಸಿದನು. ಕಲ್ಮಠಕ್ಕೆ ಮಡಿವಾಳಪ್ಪನ ಅಧಿಕಾರ ತಪ್ಪಿಸಿ ಹೊಸಗುರುವನ್ನು ಮಾಡಿದೆವೆಂದು ದುರ್ಜನರು ಮನದೊಳಗೇ ಉಲ್ಲಾಸ ಪಡುತ್ತ ಇರಹತ್ತಿದರು.

ಇತ್ತ ಕಾಶಿಗೆ ಹೊರಟ ನಮ್ಮ ಮಡಿವಾಳಪ್ಪನವರು ನಿರುಪಾಧಿಕರಾಗಿ ಪಯಣದ ಮೇಲೆ ಪಯಣವನ್ನು ಮಾಡುತ್ತ ಪ್ರಯಾಗಕ್ಕೆ ಬಂದಿಳಿದರು. ಅಲ್ಲಿ ಅವರು ವಿಧಿಪೂರ್ವಕವಾಗಿ ಕ್ಷೇತ್ರವಾಸವನ್ನು ಮಾಡಿ ಗಂಗೋತ್ರಿ, ಬದರಿಕೇದಾರಮೊದಲಾದವುಗಳನ್ನು ನೋಡಿಕೊಂಡೇ ಹೋಗಬೇಕೆಂದು ಯೋಚಿಸಿದರು. ಅದರಂತೆ ಅವರು ಗಂಗೋತ್ರಿಗೆ ನಡೆದರು. ಗಂಗೋತ್ರಿಯು ದರ್ಶನವಾದ ಬಳಿಕ ಬದರಿಕಾಶ್ರಮಕ್ಕೆ ತೆರಳಿದರು. ಹೀಗೆ ಮಡಿವಾಳಪ್ಪನವರು ಎಲ್ಲ ದೊಡ್ಡ ದೊಡ್ಡ ಕ್ಷೇತ್ರಗಳನ್ನು ನೋಡಿಕೊಂಡು ವಾರಣಾಸಿಗೆ ಬಂದು ಮುಟ್ಟಿದರು. ಅಲ್ಲಿ ಮಡಿವಾಳಸ್ವಾಮಿಗಳು ಭಕ್ತಿಪೂರ್ವಕವಾಗಿ ಶ್ರೀವಿಶ್ವೇಶ್ವರನ ದರ್ಶನ ತಕ್ಕೊಂಡು ಗಂಗಾಮಾತೆಯನ್ನು ಪೂಜಿಸಿದರು. ಅವರು ಒಂದು ಕಲಶವನ್ನು ತಕ್ಕೊಂಡು ಅದರಲ್ಲಿ ಪರಮ ಪವಿತ್ರವಾದ ಭಾಗೀರಥಿಯ ನಿರ್ಮಲೋದಕವ

ನ್ನು ತುಂಬಿದರು. ಬಳಿಕ ಆ ಕಲಶದ ಬಾಯಿಯನ್ನು ಬಂದು ಮಾಡಿ ಅದಕ್ಕೆ ಅರಗಿನ ಮೋಹರನ್ನು ಮಾಡಿದರು. ನಂತರ ಅದನ್ನು ಒಂದು ಕಾವಡಿಯಲ್ಲಿರಿಸಿ ಸಂಗಡ ಬಂದಿದ್ದ ಶಿವಪೂಜೀ ಮಲ್ಲಪ್ಪನನ್ನು ಕರೆದು—ಮಲ್ಲಾ, ಈ ಕಾವಡಿಯನ್ನು ತಕ್ಕೊಂಡು ಊರಕಡೆ ನಡೆ. ನಾನು ಹಿಂದಿನಿಂದ ಬರುವೆನು; ನಾನು ಬರುವವರೆಗೆ ಈ ಕಲಶದ ಮೋಹರನ್ನು ಮಾತ್ರ ಒಡೆಯಬಾರದು. ತಿಳಿಯಿತೇ, ಎಂದು ಅವನಿಗೆ ಕಟ್ಟಪ್ಪಣೆ ಮಾಡಿದರು. ಮಲ್ಲಪ್ಪನು ಕಾವಡಿಯನ್ನು ಹೊತ್ತುಕೊಂಡು ಕಾಶಿಯಿಂದ ಹೊರಟು ಕಿತ್ತೂರ ಮಾರ್ಗವನ್ನು ಹಿಡಿದನು. ಮಡಿವಾಳಸ್ವಾಮಿಗಳು ಕೆಲವುದಿನ ಕಾಶಿಯಲ್ಲಿಯೇ ನಿಂತುಕೊಂಡರು.

ಹೀಗೆ ಶಿವಪೂಜೀಮಲ್ಲಪ್ಪನು ಕಾಶಿಯಿಂದ ಹೊರಟು ಕೆಲವು ದಿವಸಗಳಾದ ಮೇಲೆ ಕಿತ್ತೂರನ್ನು ಹೊಂದಿದನು. ಅವನು ಬಾಪೂಸಾಹೇಬನ ಮುಂದೆ ಕಾವಡಿಯನ್ನಿರಿಸಿ ಸ್ವಾಮಿಗಳ ಅಪ್ಪಣೆಯನ್ನು ನಿವೇದಿಸಿದನು. ಮಡಿವಾಳಸ್ವಾಮಿಯ ಸಹವಾಸವೇ ಬೇಡವೆಂದು ಕಂಗೆಟ್ಟು ಕುಳಿತಿರುವ ಬಾಪೂಸಾಹೇಬನು ಅವರ ಅಪ್ಪಣೆಯನ್ನು ಮನ್ನಿಸುವನೇ? ಅವನು ಆ ಕಲಶದ ಮೋಹರನ್ನು ಒಡೆದು ಭಾಗೀರಥಿಯನ್ನು ಉಪಯೋಗಿಸಿಕೊಂಡು ಬಿಟ್ಟನು. ಅದನ್ನು ಕಂಡು ಮಲ್ಲಪ್ಪನು ನಿರುಪಾಯನಾಗಿ ತನ್ನ ಊರಿಗೆ ಹೊರಟು ಹೋದನು. ಮುಂದೆ ಕೆಲವು ದಿವಸಗಳ ಮೇಲೆಸ್ವಾಮಿಗಳು ಬಂದರು. ಅವರು ಮೊಟ್ಟಮೊದಲು ಶಿವಪೂಜೀ ಮಲ್ಲಪ್ಪನ ಗ್ರಾಮಕ್ಕೆ ಬಂದರು. ಮಡಿವಾಳ ಸ್ವಾಮಿಯನ್ನು ಕಂಡು ಮಲ್ಲಪ್ಪನು ಬೆದರಿದನು. ಅವನು ತನ್ನ ಮನಸ್ಸಿನಲ್ಲಿ—ಅಹಾ, ನಾನು ಗುರ್ವಾಜ್ಞೆಯನ್ನು ಮೀರಿರುವೆನು; ಈಗ ಸ್ವಾಮಿಗಳು ಕೇಳಿದರೆ ಏನು ಹೇಳಲಿ? ಎಂದು ಯೋಚಿಸುತ್ತ ಥರಥರ ನಡುಗುತ್ತ ಸ್ವಾಮಿಗಳಿಗೆ ನಮಸ್ಕರಿಸಿದನು, ಆಗ ಮಡಿವಾಳಸ್ವಾಮಿಗಳು—ಕಾವಡಿಯೆಲ್ಲಿ? ಎಂದು ಮಲ್ಲಪ್ಪನನ್ನು ಕೇಳಿದರು. ಮೊದಲೇ ಭಯಭೀತನಾದ ಮಲ್ಲಪ್ಪನು ಸ್ವಾಮಿಗಳ ಈ ಪ್ರಶ್ನೆಯಿಂದ ತೀರ ಗಾಬರಿಯಾದನು; ಅವನು ತಡವರಿಸುತ್ತ ಆ ಕಲಶದ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ ಮಡಿವಾಳಸ್ವಾಮಿಗಳಿಗೆ ಅತಿಶಯ ಸಿಟ್ಟು ಬಂತು; ಅವರು ಮಲ್ಲಪ್ಪನನ್ನುದ್ದೇಶಿಸಿ—ಮಲ್ಲಾ, ಗುರುದ್ರೋಹಿಯಿರುವಿ, ನಿನಗೆ ನಾನು ಕಾವಡಿಯನ್ನು ಜತನ ಮಾಡೆಂದು ಹೇಳಿರಲು ನೀನು ಅದನ್ನು ಹ್ಯಾಗೆ ಕೊಟ್ಟೆ? ನೀನು ನನ್ನಾಜ್ಞೆಯನ್ನು ಮೀರಿದ್ದಕ್ಕಾಗಿ ನೂರು ಮಂದಿ ಅಯ್ಯನವರನ್ನು ಉಣಿಸು; ಇಲ್ಲದಿದ್ದರೆ ನಿನ್ನ ಸಂಸಾರವು ಮಣ್ಣುಗೂಡೀತು! ಎಂದು

ನುಡಿದರು. ಮಲ್ಲಪ್ಪನು ಸ್ವಾಮಿಗಳಿಗೆ ಪರಿಪರಿಯಾಗಿ ಕ್ಷಮೆಬೇಡಿಕೊಂಡು ಅವರು ಹೇಳಿದಂತೆ ನೂರುಮಂದಿ ಅಯ್ಯನವರಿಗೆ ಬಿನ್ನಣವನ್ನು ಮಾಡಿಸಿದನು. ಒಳಿಕ ಮಡಿವಾಳಪ್ಪನವರು ಕಿತ್ತೂರಿಗೆ ಬಂದರು; ಅವರು ತಮ್ಮ ಕಲ್ಮಠಕ್ಕೆ ಹೋಗಿ ನೋಡುತ್ತಾರೆ. ಅಲ್ಲಿ ಎಲ್ಲ ಹೊಸಸೃಷ್ಟಿಯಾಗಿತ್ತು. ತಾವು ಮಾಡಿದ ವ್ಯವಸ್ಥೆಯು ಒಂದೂ ಕಣ್ಣಿಗೆ ಬೀಳಲಿಲ್ಲ. ತಾವು ನಿಯಮಿಸಿದ ಅಧಿಕಾರಿಯೂ ಇದ್ದಿಲ್ಲ. ಇದರಿಂದ ಅವರು ಆಶ್ಚರ್ಯಪಡುತ್ತ ಮಠದೊಳಗೆ ಪ್ರವೇಶಮಾಡಲು, ಅಲ್ಲಿ ಒಬ್ಬ ಹೊಸ ಸ್ವಾಮಿಯು ಅವರ ಕಣ್ಣಿಗೆ ಬಿದ್ದನು. ಆಗ ಮಡಿವಾಳಪ್ಪನವರು ಅವನನ್ನು ಕುರಿತು—ನೀನು ಯಾರು ಇಲ್ಲೇಕೆ ಕುಳಿತಿರುವಿ? ಎಂದು ಕೇಳಿದರು. ಮಡಿವಾಳಸ್ವಾಮಿಯ ಉಗ್ರರೂಪವನ್ನು ನೋಡಿ, ಆ ಹೊಸ ಸ್ವಾಮಿಯು ಅಂಜುತ್ತಂಜುತ್ತ—ನನ್ನನ್ನು ಬಾಪೂಸಾಹೇಬರು ಈ ಮಠಕ್ಕೆ ಪಟ್ಟಧರಮೂರ್ತಿಯನ್ನಾಗ ಮಾಡಿದ್ದಾರೆ, ಎಂದು ನುಡಿದನು. ಈ ಸಂಗತಿಯನ್ನು ಕೇಳಿ ಮಡಿವಾಳಪ್ಪನವರಿಗೆ ನಖಶಿಖಾಂತವಾಗಿ ಸಿಟ್ಟು ಬಂದಿತು. ಅವರ ಕಣ್ಣುಗಳು ಕೆಂಡದಂತಾದವು. ಆಗ ಅವರು ಸಿಟ್ಟಿನ ಭರದಲ್ಲಿ ಒಂದು ಕತ್ತಿಯನ್ನು ತಕ್ಕೊಂಡು ಆ ಗುರುಸಿದ್ಧಸ್ವಾಮಿಯನ್ನು ಹೊಡೆಯ ಹೋದರು. ಆದರೆ ಗುರುಸಿದ್ಧಸ್ವಾಮಿಯು ಜ್ಯಾತ್ಯಾಪುಕ್ಕನಾದ್ದರಿಂದ ಅವನು ಅಂಜಿ ಮಡಿವಾಳಪ್ಪನವರಿಗೆ ಲಂಗಲಾಚಿ ಬೇಡಿಕೊಳ್ಳಹತ್ತಿದನು. ಅವನ ದೀನವಾಣಿಯಿಂದ ಮಡಿವಾಳಪ್ಪನವರ ಮನಸ್ಸು ಕರಗಿ—"ಥೂ, ನೂಕಿಯ ಮಗನೇ ಹೋಗು, ನಿನ್ನನ್ನೇನು ಮಾಡಲಿ" ಎಂದು ನುಡಿದು ಕೈಯೊಳಗಿನ ಕತ್ತಿಯನ್ನು ಒಗೆದು—ಆ ಒಕ್ಕಲಿಗ್ಯಾ ಮುಂದೇಗಂಡನು, ನನ್ನನ್ನು ಕಾಶಿಗೆ ಕಳಿಸಿ ಈ ಹೊಲಬಾಳಕೆಲಸವನ್ನು ಮಾಡಿದನೇ," ಎಂದು ಅಂದು ಮಠದಲ್ಲಿದ್ದ ಒಂದು ದೊಡ್ಡಗಳಗಿಯ ಬಂದೂಕವನ್ನು ತಕ್ಕೊಂಡು ದೇಸಾಯರ ವಾಡೆಯ ಕಡೆಗೆ ನಡೆದರು. ಮಡಿವಾಳಪ್ಪನವರ ಈ ಅದ್ಭುತಕೃತಿಯನ್ನು ತಿಳಿದು ವಾಡೇದೊಳಗಿನ ಜನರು ಅಂಜಿ, ಮಡಿವಾಳಪ್ಪನವರ ಕಣ್ಣಿಗೆ ಈಗ ಯಾರೂ ಬೀಳಬಾರದೆಂದು ವಾಡೆಯ ಬಾಗಿಲವನ್ನು ಹಾಕಿಕೊಂಡು ಕುಳಿತರು. ಮಡಿವಾಳಪ್ಪನವರು ಅರಮನೆಯ ಬಾಗಿಲ ಮುಂದೆ ಹೋಗಿ ನಿಂತುಕೊಂಡರು. ಬಾಗಿಲವು ಭದ್ರವಾಗಿ ಹಾಕಿತ್ತು. ಆಗ ಅವರು ಸಿಟ್ಟಿನಿಂದ ಸಂತಪ್ತರಾಗಿ, ತಮ್ಮ ಕೈಯೊಳಗಿನ ಬಂದೂಕಿಯನ್ನು ಚಲ್ಲಿಕೊಟ್ಟು ಸಂತಾಪಾತಿಶಯದಿಂದ ಅರಮನೆಯನ್ನು ನೋಡುತ್ತ ಅಲ್ಲಿಯೇ ನಿಂತುಕೊಂಡರು.

---

ಆರನೆಯ ಪ್ರಕರಣ.

---

## ಖಲನಿಗ್ರಹವೂ—
## ನಿಂದಕರ ಮುಖಭಂಗವೂ.




ಮೇರೆಗೆ ಮಡಿವಾಳಪ್ಪನವರು ಕೆಲವು ಹೊತ್ತು ಅರಮನೆಯ ಮುಂದೆ ನಿಂತ ಬಳಿಕ ಅವರು ತಮ್ಮ ಮನಸ್ಸಿನಲ್ಲಿ ಬಾಪೂಸಾಹೇಬನನ್ನು ಶಿಕ್ಷಿಸಬೇಕೆಂದು ಯೋಚಿಸಿದರು. ಬಾಪೂಸಾಹೇಬನು ನಿಜವಾಗಿಯೇ ಶಿಕ್ಷಾರ್ಹನಿದ್ದನು. ದುರ್ಜನರ ಸಂಗದಿಂದ ಬಾಪೂಸಾಹೇಬನು ಸತ್ಪುರುಷರ ನಿಂದಕನೂ, ಜನಕಂಟಕನೂ ಆಗಿದ್ದನು. ದುರ್ಜನರ ಉಪಟಳವನ್ನು ಕುಗ್ಗಿಸಬೇಕೆಂಬ ವಿಚಾರವು ಭೂತದಯಾಪರರಾದ ನಮ್ಮ ಮಡಿವಾಳಪ್ಪನವರಲ್ಲಿ ಉಂಟಾದದ್ದು ಸ್ವಾಭಾವಿಕವಾಗಿರುವದು. ಆಗ ಅವರು ತಮ್ಮ ಮೈ ಮೇಲಿನ ವಸ್ತ್ರಗಳನ್ನು ತೆಗೆದು ದಿಗಂಬರರಾದರು. ಬಳಿಕ ಅವರು ಆ ವಸ್ತ್ರಗಳನ್ನು ಅರಮನೆಯಬಾಗಿಲ ಮುಂದೆ ಸುಟ್ಟು ಬೂದೀ ಮಾಡಿ, ಅದನ್ನು ಮೈ ತುಂಬ ಹಚ್ಚಿಕೊಂಡರು. ಮತ್ತು ಸಂತಾಪಾತಿಶಯದಿಂದ ಕೆಂಗಣ್ಣುಗಳು ರೌದ್ರತೆಯನ್ನು ಬೀರುತ್ತಿರಲು ನುಡಿದರೇನಂದರೆ—"ಕಿತ್ತೂರ ದೇಸಗತಿಯು ನಾಶವಾಗಲಿ, ಈ ಬಾಪೂಸಾಹೇಬನ ಅರಮನೆಯಲ್ಲಿ ಕತ್ತೆ-ನಾಯಿಗಳು ಹೊರಳಾಡಲಿ!"

ಈ ಪ್ರಕಾರ ಶಾಪವಾಣಿಯನ್ನುಚ್ಚರಿಸಿ ಮಡಿವಾಳಪ್ಪನವರು ಅಲ್ಲಿಂದ ತಟ್ಟನೆ ಹೊರಟರು. ಧರ್ಮಗುರುವಿನ ಉಪಾಧಿಯು ತನ್ನಿಂದ ತಾನೇ ಕಡಿದು ಹೋದ್ದರಿಂದ ಮಡಿವಾಳಪ್ಪನವರು ಒಂದು ಬಗೆಯಿಂದ ಸಮಾಧಾನವನ್ನು ತಾಳಿ ದಿಗಂಬರ ಸ್ವರೂಪವನ್ನು ಹೊಂದಿದರು. ಈ ದಿನ ಮೊದಲ್ಗೊಂಡು ಇವರಿಂದ ನಿಜವಾದ ಲೋಕಕಲ್ಯಾಣದ ಕೆಲಸಗಳು ಆಗಹತ್ತಿದವೆಂದು ಹೇಳಬಹುದು. ಮಡಿವಾಳಪ್ಪನವರು ಹೊರಟು ಹೋಗಲು ಕಾವಲುಗಾರರು ಅರಮನೆಯ ಬಾಗಿಲ ತೆರೆದು ನಡೆದ ಸಂಗತಿಯನ್ನೆಲ್ಲ ಬಾಪೂಸಾಹೇಬನ ಮುಂದೆ ನಿವೇದಿಸಿದರು, ಮಡಿವಾಳಪ್ಪನು ಮಾಡಿದ್ದನ್ನು ಕೇಳಿ ಬಾಪೂಸಾಹೇಬನು ಸಂತಾಪಗೊಂಡನು; ಅವನು ಕೂಡಲೆ ತನ್ನ ದಂಡಿನವರಿಗೆ ಮಡಿವಾಳಯ್ಯನನ್ನು ಹಿಡಿದು

ಕೊಂಡು ಒರಬೇಕೆಂದು ಅಪ್ಪಣೆಯನ್ನಿತ್ತನು. ಆ ದಂಡಿನವರು ಮಡಿವಾಳಪ್ಪನನ್ನು ಬೆನ್ನಟ್ಟಿ ನಡೆದರು. ಆ ದಂಡಿನವರಿಗೂ ಮಡಿವಾಳಪ್ಪನವರಿಗೂ ನಂದೀಹಳ್ಳೀ ಗುಡ್ಡದಲ್ಲಿ ಗಂಟುಬಿದ್ದಿತು. ಆಗ ದಂಡಿನ ಸಿಪಾಯಿಗಳು ಅವರನ್ನು ಹಿಡಿಯ ಹೋದರು. ಆದರೆ ಮಡಿವಾಳಪ್ಪನವರು ಅವರ ಕೈಗೆ ಸಿಗಲಿಲ್ಲ. ಅವರು ಹವಣಿಯಾದ ಕಲ್ಲುಗಳಿಂದ ಎಸೆಯುತ್ತ ಬಂದ ಸಿಪಾಯಿಗಳನ್ನು ಗಾಯ ಪಡಿಸಿ, ಮುಂದೆ ಸಾಗಿದರು. ಆದರೆ ಕುದುರೆಯ ಸವಾರರು ಮಡಿವಾಳಪ್ಪನವರನ್ನು ಬೆನ್ನಟ್ಟಿ ಬೆಳ್ಳೋಡಿಯ ಬಳಿಯಲ್ಲಿ ಹಿಡಿದರು. ಮಡಿವಾಳಪ್ಪನವರು ಅವರ ಕೈಯಲ್ಲಿ ಸಿಕ್ಕರು. ಆ ಸ್ವಾರರು ಅವರನ್ನು ಬೆಳ್ಳೋಡಿಯ ಮಲ್ಲಿಕಾರ್ಜುನನ ಗುಡಿಯಲ್ಲಿ ಸೆರೆಹಾಕಿ ಬಾಪೂಸಾಹೇಬನಿಗೆ ಸುದ್ದೀ ಕಳುಹಿಸಿದರು. ಮರುದಿನ ದಂಡಿನವರು ಮಡಿವಾಳಪ್ಪನನ್ನು ಕಿತ್ತೂರಿಗೆ ಒಯ್ಯುತಕ್ಕವರು; ಅಷ್ಟರಲ್ಲಿ ಆ ರಾತ್ರೀ ಮಡಿವಾಳಪ್ಪನವರು ತಮ್ಮನ್ನು ಸೆರೆಹಾಕಿ ಇಟ್ಟಿದ್ದ ಗರ್ಭಗುಡಿಯ ಕಲ್ಲಿನ ಮುಚ್ಚಾಸವನ್ನು ಕಿತ್ತು ಪಲಾಯನ ಸೂಕ್ತವನ್ನು ಜಪಿಸಿದರು. ಮರುದಿನ ಬೆಳಗಾದ ಮೇಲೆ ಸ್ವಾರರು ಬಾಗಿಲ ತೆರೆದು ನೋಡುತ್ತಾರೆ, ಮಡಿವಾಳಪ್ಪನು ಇಲ್ಲವೇ ಇಲ್ಲ. ಗರ್ಭಗುಡಿಯ ಕಲ್ಲಿನ ಮುಚ್ಚಾಸವು ಕಿತ್ತು ಹೋಗಿತ್ತು. ಆಗ ಸೈನಿಕರು ಸಖೇದಾಶ್ಚರ್ಯವನ್ನು ಪಟ್ಟು, ಮಡಿವಾಳಪ್ಪನನ್ನು ಪುನಃ ಹುಡುಕಲಿಕ್ಕೆ ಪ್ರಾರಂಭಿಸಿದರು. ಆದರೆ ಅವರಿಗೆ ಮಡಿವಾಳಪ್ಪನು ಎಲ್ಲಿಯೂ ಸಿಗಲಿಲ್ಲ. ಕಡೆಗೆ ಅವರು ಹತಾಶರಾಗಿ ಕಿತ್ತೂರಿಗೆ ಹೊರಟು ಹೋದರು.

ಇತ್ತ ಮಲ್ಲಿಕಾರ್ಜುನನ ಗುಡಿಯೊಳಗಿಂದ ಓಡಿ ಹೋದ ಮಡಿವಾಳಪ್ಪನವರು ನೋಗಲಪೆಂಬ ಗುಡ್ಡಕ್ಕೆ ಹೋಗಿ, ಅಲ್ಲಿ ಹನ್ನೊಂದು ದಿವಸಗಳವರೆಗೆ ನಿರಾಹಾರದಿಂದ ಶಿವಧ್ಯಾನಪರಾಯಣರಾಗಿ ಕುಳಿತು ಬಿಟ್ಟರು. ಬಳಿಕ ಅವರು ಹನ್ನೆರಡನೇ ದಿವಸ ಅಲ್ಲಿಂದ ಹೊರಟು ಬೆಳ್ಳೋಡಿಗೆ ಬಂದರು. ಬೆಳ್ಳೋಡಿಯಲ್ಲಿ ಮಡಿವಾಳಪ್ಪನವರ ಭಕ್ತಪರಿವಾರವು ಬಹಳವಿತ್ತು. ಮಡಿವಾಳಪ್ಪನವರು ಬೆಳ್ಳೋಡಿಯಲ್ಲಿ ಜಕಾತಿ ಬಸಲಿಂಗನೆಂಬವನೊಬ್ಬ ಭಕ್ತನ ಮನೆಗೆ ಹೋದರು. ಬಾಪೂಸಾಹೇಬನ ದಂಡಿನವರಿಗೆ ಮಂಕುಬೂದೀ ಹಚ್ಚಿ ಪಾರಾಗಿ ಬಂದ ಗುರುಗಳನ್ನು ನೋಡಿ ಬಸಲಿಂಗಪ್ಪನು ಅತ್ಯಾನಂದ ಪಟ್ಟು ಅವರನ್ನು ಪೂಜಿಸಿದನು. ಬಳಿಕ ಮಡಿವಾಳಪ್ಪನವರು ಬಸಲಿಂಗಪ್ಪನನ್ನು ಕುರಿತು—ನಮಗೆ ನಾಲ್ಕು ಹೂವಿನ ದಂಡೆಗಳನ್ನೂ ಒಂದು ಕಬ್ಬಿಣದ ಬೇಡಿಯನ್ನೂ ತರಿಸಿ ಕೊಡು ಎಂದು ಹೇಳಿದರು. ಬಸಲಿಂಗಪ್ಪನು ಅದರಂತೆ ಮಾಡಲು ಮಡಿವಾಳಪ್ಪನವರು

ಒಂದು ಕೊಡವನ್ನು ತಕ್ಕೊಂಡು ವೀರಭದ್ರದೇವರ ಗುಡಿಯ ಮೇಲೆ ಹತ್ತಿ ಅದನ್ನು ತೂರಿದರು. ಆಗ ಆ ಕೊಡದೊಳಗಿಂದ ಸುವರ್ಣದ ನಾಣ್ಯಗಳು ಸೂರೆಯಾದವು. ಈ ಅದ್ಭುತ ಚಮತ್ಕಾರವನ್ನು ನೋಡಿ ಜನರು ಬೆರಗಾದರು. ಮಡಿವಾಳಪ್ಪನು ಮನುಷ್ಯನಲ್ಲವೆಂದು ಅವರು ತಿಳಿದರು. ಮಡಿವಾಳಪ್ಪನವರ ಅಪ್ಪಣೆಯಿಂದ ಆ ಸೂರೆಯಾದ ನಾಣ್ಯಗಳನ್ನು ಹೊಲೆಯರು ಆರಿಸಿಕೊಂಡರು. ಆ ನಂತರ ಮಡಿವಾಳಪ್ಪನು ಆ ಹೂವಿನ ದಂಡೆಗಳನ್ನು ತಲೆಯಲ್ಲಿ ಧರಿಸಿಕೊಂಡು, ಕಬ್ಬಿಣದ ಬೇಡಿಯನ್ನು ಕಾಲಲ್ಲಿ ಹಾಕಿಕೊಂಡು ಮಲ್ಲಿಕಾರ್ಜುನನ ಗರ್ಭಗುಡಿಯಲ್ಲಿ ಪ್ರವೇಶ ಮಾಡಿ ಬಸಲಿಂಗಾ, ನೀನು ಈ ಗುಡಿಯ ಬಾಗಿಲವನ್ನು ಇಕ್ಕಿ ಕೀಲೀಹಾಕು; ಮತ್ತು ೧೧ ದಿವಸಗಳ ತನಕ ನೀನು ಇಲ್ಲಿಯೇ ಇರತಕ್ಕದ್ದು; ಎಂದು ಅವನಿಗೆ ಅಪ್ಪಣೆ ಮಾಡಿದರು. ಬಸಲಿಂಗಪ್ಪನು ಆ ಪ್ರಕಾರ ಮಾಡಿ ಗುಡಿಯ ಬಾಗಿಲವನ್ನು ಕಾಯ ಹತ್ತಿದನು. ಹೀಗಿರಲು ಹನ್ನೊಂದನೆಯ ದಿನ ಮಡಿವಾಳಪ್ಪನು ಕಾಶಿಯಲ್ಲಿ ಇರುವನೆಂಬ ವರ್ತಮಾನವು ಬಂದಿತು; ಆಗ ಭಕ್ತರೆಲ್ಲರೂ ಬಾಗಿಲ ತೆರೆದು ನೋಡಲು ಅಲ್ಲಿ ಮಡಿವಾಳಪ್ಪನು ಇದ್ದಿಲ್ಲ. ಜನರು ಮಡಿವಾಳಪ್ಪನನ್ನು ಬಹು ವಿಧವಾಗಿ ಸ್ತುತಿಸಿ ಆತನ ಜಯಘೋಷವನ್ನು ಮಾಡಿದರು. ಮಡಿವಾಳಪ್ಪನವರಲ್ಲಿ ವಿಶೇಷ ಭಕ್ತಿಯುಳ್ಳ ಜನರು, ಅವರ ದರ್ಶನೋತ್ಸುಕರಾಗಿ ಕಾಶಿಗೆ ಹೋದರು.

ಹೀಗೆ ಗುಪ್ತಗಾಮಿಗಳಾಗಿ ಹೋದ ಮಡಿವಾಳಪ್ಪನವರು ಕಾಶಿಯಲ್ಲಿ ಬಹಳ ದಿವಸ ನಿಂತುಕೊಂಡು ಬಿಟ್ಟರು. ಅಲ್ಲಿ ಅವರಿಗೆ ನರಸಿಂಹಾಚಾರ್ಯನೆಂಬೋರ್ವ ಶಿಷ್ಯನು ಪ್ರಾಪ್ತನಾದನು. ನರಸಿಂಹಾಚಾರ್ಯನು ಶೀಲ, ವಿನಯ ಗುಣೋಪೇತನಾಗಿ ಮಡಿವಾಳಪ್ಪನವರ ಸೇವೆಯನ್ನು ಮಾಡುತ್ತ ಅವರಲ್ಲಿ ಸಂಸ್ಕೃತವನ್ನು ಕಲಿಯಲಾರಂಭಿಸಿದನು. ನರಸಿಂಹಾಚಾರ್ಯನ ಅಧಿಕಾರವನ್ನು ತಿಳಿದು ಮಡಿವಾಳಪ್ಪನವರು ಅವನಿಗೆ ಪ್ರೇಮದಿಂದ ವಿದ್ಯಾಭ್ಯಾಸ ಮಾಡಿಸತೊಡಗಿದರು. ಹೀಗಿರುತ್ತಿರಲು ಕಾಶಿಯಲ್ಲಿಯ ಕೆಲಪಂಡಿತರು ಮಡಿವಾಳಪ್ಪನವರ ವಿಷಯವಾಗಿ ಕುಚೇಷ್ಟೆಯನ್ನೆಬ್ಬಿಸಿದರು. ಶಾಂತರೂ, ಶಿವಧ್ಯಾನಪರಾಯಣರೂ, ಪೂರ್ಣ ಸುಸಂಸ್ಕೃತರೂ, ಜ್ಞಾನಿಗಳೂ ಆಗಿದ್ದ ನಮ್ಮ ಮಡಿವಾಳಪ್ಪನವರು ಆ ದುರ್ಜನರ ಕುಚೇಷ್ಟೆಗಳನ್ನು ಲಕ್ಷ್ಯದಲ್ಲಿ ತರಲಿಲ್ಲ. ಮುಂದೆ ಕೆಲವು ದಿವಸಗಳ ಮೇಲೆ ಕಾಶಿಯಲ್ಲಿ ಪಂಡಿತರದೊಂದು ಸಭೆಗೂಡಿತು. ಆ ಸಭೆಗೆ ಮಡಿವಾಳಪ್ಪನವರು ಆಮಂತ್ರಿತರಾಗಿ ಹೋದರು. ಗೀರ್ವಾಣಭಾಷೆಯನ್ನು

ಕರತಲಾಮಲಕವಾಗಿ ಮಾಡಿಕೊಂಡಂಥ ದೊಡ್ಡ ದೊಡ್ಡ ಪಂಡಿತರು ಮಡಿವಾಳಪ್ಪನವರ ಯೋಗ್ಯತೆಗೆ ಬೊಟ್ಟು ಕಚ್ಚಿದರು. ಮಡಿವಾಳಪ್ಪನವರು ದುರ್ಜಯ ಪಂಡಿತರೆಂದು ಆ ಸಭೆಯಲ್ಲಿ ನಿರ್ಣಯವಾಯಿತು. ಹೀಗೆ ಪಂಡಿತರಿಂದ ಮಡಿವಾಳಪ್ಪನ ಗೌರವವಾದದ್ದನ್ನು ನೋಡಿ, ನಿಂದಕರಿಗೆ ಸಹನವಾಗಲಿಲ್ಲ; ಅವರು ಮಡಿವಾಳಪ್ಪನವರಲ್ಲಿ ಏನು ಹುಳುಕು ಹುಡುಕೋಣವೆಂದು ಎಣಿಕೆಹಾಕುತ್ತಿರಲು, ಮಡಿವಾಳಪ್ಪನವರ ದಿಗಂಬರರೂಪವು ಅವರ ಕಣ್ಣಿಗೆಕಟ್ಟಿತು. ಆಗ ಅವರು ಕುತರ್ಕಗಳನ್ನು ಕಲ್ಪಿಸಿಕೊಂಡು, ಆ ವಿದ್ವಜ್ಜನರ ಸಭೆಯಲ್ಲಿ ತಟ್ಟನೆ ನುಡಿದದ್ದೇನಂದರೆ—"ಈ ಷಂಢಮಡಿವಾಳಯ್ಯನನ್ನು ನೀವು ಏನೆಂದು ಗೌರವಿಸುವಿರಿ? ಈತನು ಗಂಡಸಾಗಿದ್ದರೆ ಹೀಗೆ ದಿಗಂಬರನಾಗಿ ತಿರುಗುತ್ತಿದ್ದನೇ? ತಿರುಗಿದರೂ ಹೀಗೆ ನಿರ್ವಿಕಾರನಾಗಿ ಇರುತ್ತಿದ್ದನೇ?"

ಈ ಮೇರೆಗೆ ಆಡಿದ ದುರ್ಜನರ ಮಾತುಗಳನ್ನು ಕೇಳಿ ಮಡಿವಾಳಪ್ಪನು ನಕ್ಕು ಆ ದುರ್ಜನ ಪಂಡಿತರನ್ನು ಕುರಿತು—ಪಂಡಿತರೇ, ನಾನು ನಿರ್ವೀರ್ಯನೆಂದು ನಿಮಗೆ ಸಂಶಯವು ಬಂದಿರುವದೋ? ಒಳ್ಳೇದು, ನಿಮಗೆ ನನ್ನ ವೀರ್ಯದ ಸಾಮರ್ಥ್ಯದ ಪರಿಚಯ ಮಾಡಿಕೊಡುವೆನು ಎಂದು ನುಡಿದು, ತಮ್ಮ ಶಿಷ್ಯನಾದ ನರಸಿಂಹಾಚಾರ್ಯನಿಗೆ ಒಂದು ಪಾತ್ರೆಯನ್ನು ತರಹೇಳಿದರು. ಬಳಿಕ ಮಡಿವಾಳಪ್ಪನವರು ಶಿಷ್ಯನು ತಂದಿದ್ದ ಪಾತ್ರೆಯನ್ನು ಕೈಯಲ್ಲಿ ತಕ್ಕೊಂಡು ತಮ್ಮ ತೊಡೆಯನ್ನು ಚಪ್ಪರಿಸಿದರು. ಕೂಡಲೆ ಮಡಿವಾಳಪ್ಪನವರ ಜನನೇಂದ್ರಿಯವು ಜೇತರಿಸಿ ಅಮೋಘವಾದ ವೀರ್ಯವು ಆ ಪಾತ್ರೆಯಲ್ಲಿ ಸುರಿಯಿತು. ಕ್ಷಣದಲ್ಲಿ ಪಾತ್ರೆಯು ತುಂಬಿ ವೀರ್ಯವು ಹೊರಚಲ್ಲಿ, ಅಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಬಿದ್ದು ಅದನ್ನು ದಹಿಸಹತ್ತಿತು. ತೇಜೋಮಯವಾದ ಆ ವೀರ್ಯವು ರತ್ನಗಂಬಳಿಯನ್ನು ಸುಡಹತ್ತಿದ್ದನ್ನು ನೋಡಿ ಅಲ್ಲಿ ನೆರೆದ ಪಂಡಿತರು ಗಾಬರಿಯಾದರು. ಅವರು ಮಡಿವಾಳಪ್ಪನವರನ್ನು ಕುರಿತು ಪ್ರಾರ್ಥಿಸಹತ್ತಿದರು. ಬಳಿಕ ಮಡಿವಾಳಪ್ಪನವರು ಆ ಪಾತ್ರೆಯೊಳಗಿನ ವೀರ್ಯವನ್ನು ಆ ಗುಪ್ತ ಇಂದ್ರಿಯ ಮಾರ್ಗದಿಂದಲೇ ಶೋಷಿಸಿಕೊಂಡುಬಿಟ್ಟರು. ಈ ಅದ್ಭುತವಾದ ಸಾಮರ್ಥ್ಯವನ್ನು ನೋಡಿ ಆ ದುರ್ಜನರ ಮುಖಭಂಗವಾಯಿತು. ಅವರು ಮಡಿವಾಳಪ್ಪನವರ ಇಂದ್ರಿಯ ನಿಗ್ರಹಕ್ಕೆ ಕೌತುಕಪಟ್ಟು ಅವರಿಗೆ ಶರಣು ಹೋದರು. ಸಜ್ಜನರಾದ ನಮ್ಮ ಮಡಿವಾಳಪ್ಪನವರು ಅವರನ್ನು ಸಮಾಧಾನ ಮಾಡಿದರು.

---

ಏಳನೆಯ ಪ್ರಕರಣ.



## ತೀರ್ಥಾಟನವೂ -ಬ್ರಹ್ಮರಾಕ್ಷಸೋದ್ಧರಣವೂ,




ಂದಿನ ಪ್ರಕರಣದ ಕೊನೆಯಲ್ಲಿ ಹೇಳಿದಂತೆ ಮಡಿವಾಳಪ್ಪನವರು ಕಾಶಿಯಲ್ಲಿ ದುರ್ಜನರ ಮುಖಭಂಗವನ್ನು ತಮ್ಮ ಅಗಾಧವಾದ ಸಾಮರ್ಥ್ಯದಿಂದ ಮಾಡಲು, ಅಲ್ಲಿಯ ಎಲ್ಲ ಜನರೂ ಮಡಿವಾಳಪ್ಪನವರಿಗೆ ತಲೆವಾಗಿ ನಡೆಯುಹತ್ತಿದರು. ದೈವೀಸಾಮರ್ಥ್ಯದ ಮುಂದೆ ಮನುಷ್ಯಪ್ರಯತ್ನವು ನೆಲೆ ಮುಟ್ಟುವದುಂಟೆ? ಪಂಡಿತರು-ಪಾಮರರು ಕೂಡಿಯೇ ಸರಿಯಾಗಿ ಮಡಿವಾಳಪ್ಪನವರನ್ನು ಪ್ರೀತಿಸಹತ್ತಿದರು ಹೀಗೆ ಕಾಶೀವಾಸಿಗಳಿಗೆ ಪ್ರಿಯರೂ, ವಂದ್ಯರೂ ಆದ ನಮ್ಮ ಮಡಿವಾಳಸ್ವಾಮಿಗಳು ಅಲ್ಲಿಂದ ಹೊರಟು ಬದರಿಕಾಶ್ರಮಕ್ಕೆ ತೆರಳಿದರು. ಅವರು ಬದರಿಕಾಶ್ರಮವನ್ನು ಕಂಡದ್ದು ಇದು ಮೂರನೆಯ ಸಾರೆಯು! ಬಳಿಕ ಅವರು ಗಂಗೋತ್ರಿ-ಹರಿದ್ವಾರ-ಅಯೋಧ್ಯೆಗಳನ್ನು ನೋಡಿಕೊಂಡು ಪ್ರಯಾಗಕ್ಕೆ ಬಂದರು. ಪ್ರಯಾಗದಲ್ಲಿ ಅವರು ಕೆಲವು ದಿನಗಳ ಮಟ್ಟಿಗೆ ಇದ್ದು ಅಲ್ಲಿಯ ಜನರಿಗೆ ತತ್ತ್ವೋಪದೇಶವನ್ನು ಮಾಡಿದರು. ಪ್ರಯಾಗ ಪಟ್ಟಣಿಗರು ನಮ್ಮ ಮಡಿವಾಳಸ್ವಾಮಿಯವರನ್ನು ಬಹುಪರಿಯಾಗಿ ಪ್ರೀತಿಸಿದರು. ನಂತರ ಅವರು ಕ್ರಮವಾಗಿ ಮಥುರಾ, ವೃಂದಾವನ, ಗೋಕುಲ, ದ್ವಾರಕೆ ಮೊದಲಾದ ಸುಪ್ರಸಿದ್ಧ ಯಾತ್ರಾಸ್ಥಳಗಳಿಗೆ ಹೋಗಿ, ಆಯಾ ಸ್ಥಾನಗಳ ದೇವತೆಗಳನ್ನು ಭಕ್ತಿಪುರಃಸ್ಸರವಾಗಿ ಕಂಡು ಅಭಿವಂದಿಸಿ, ಸ್ತವನ ಮಾಡಿದರು. ಮಡಿವಾಳಸ್ವಾಮಿಗಳ ಆಗಮನದಿಂದ ಅಲ್ಲಲ್ಲಿಯ ಜನರು ಧನ್ಯತೆಯನ್ನು ಪ್ರಕಟಿಸುತ್ತಲೇ ಇದ್ದರು.

ಬಳಿಕ ಮಡಿವಾಳಸ್ವಾಮಿಗಳು ದಕ್ಷಿಣಹಿಂದುಸ್ಥಾನವನ್ನು ಹೊಕ್ಕು ತ್ರ್ಯಂಬಕೇಶ್ವರ, ಜಗನ್ನಾಥಗಳನ್ನು ಕಂಡುಕೊಂಡು, ವಿಷ್ಣುಕಂಚಿಯೇ ಮೊದಲಾದವುಗಳ ಕಡೆಗೆ ಬಂದರು. ಆ ಮೇಲೆ ಅವರು ಮೈಸೂರ ಸಂಸ್ಥಾನದಲ್ಲಿ ಕಾಲಿಟ್ಟರು. ಮೈಸೂರ ಮಹಾರಾಜರವರು ಮಡಿವಾಳ ಸ್ವಾಮಿಗಳ ಪ್ರಖ್ಯಾತಿಯನ್ನು ಕೇಳಿ, ಅವರನ್ನು ತಮ್ಮಲ್ಲಿಗೆ ಕರೆಯಿಸಿಕೊಂಡರು. ಮೈಸೂರಲ್ಲಿದ್ದ ಆಸ್ಥಾನಪಂಡಿತರು ಮಡಿವಾಳಪ್ಪನವರ ವಿದ್ವತ್ತೆಯನ್ನು ಪರೀಕ್ಷಿಸಿದರು.

ಆದರೆ ಮಡಿವಾಳಪ್ಪನವರು ತಮ್ಮ ಪಾಂಡಿತ್ಯವನ್ನು ಮೀರಿರುವರೆಂದು ಅವರಿಗೆ ತೋರಲು, ಅವರು ಮಡಿವಾಳಪ್ಪನವರಿಗೆ ಶರಣು ಬಂದರು. ಮಹಾರಾಜರು ಸ್ವಾಮಿಗಳನ್ನು ಕಡುವೈಭವದಿಂದ ಪೂಜಿಸಿದರು. ಹೀಗೆ ರಾಜಸನ್ಮಾನವನ್ನು ಹೊಂದುತ್ತ ಮಡಿವಾಳಪ್ಪನವರು ಕೆಲವು ದಿವಸ ಮೈಸೂರಲ್ಲಿದ್ದರು. ಆಗ ಅಲ್ಲಿಯ ಪ್ರಸಿದ್ಧ ಪರಕಾಲಮಠದ ಸ್ವಾಮಿಗಳಿಗೂ ನಮ್ಮ ಮಡಿವಾಳಪ್ಪನವರಿಗೂ ವೇದಾಂತಪರ ಸಂಭಾಷಣಗಳು ನಡೆಯುತ್ತಿದ್ದವು. ಪರಕಾಲಮಠದ ಸ್ವಾಮಿಗಳು ಮಡಿವಾಳಪ್ಪನನ್ನು ಪ್ರೇಮಾದರಗಳಿಂದ ಗೌರವಿಸುತ್ತಿದ್ದರು. ಮಡಿವಾಳಸ್ವಾಮಿಗಳು ಮೈಸೂರಿನಲ್ಲಿರುವಾಗ ರಾಜವಾಡೆಯಲ್ಲಿ ನಿತ್ಯೋತ್ಸವಗಳು ನಡೆಯುತ್ತಿದ್ದವು.

ನಂತರ ಕೆಲವು ದಿವಸಗಳಮೇಲೆ ಮಡಿವಾಳಪ್ಪನವರು ರಾಮೇಶ್ವರಕ್ಕೆ ಹೊರಟರು. ಅವರು ಮಾರ್ಗದಲ್ಲಿ ಚನ್ನಪಟ್ಟಣವನ್ನು ಹೊಕ್ಕರು. ಆ ಪಟ್ಟಣದೊಳಗಿನ ಪಂಡಿತರು ಮಡಿವಾಳಸ್ವಾಮಿಗಳ ಬಾಯಿಂದ ಶಾಸ್ತ್ರಾರ್ಥ ವಿವರಣೆಯನ್ನು ಕೇಳಿ ದಂಗಾದರು. ಬಳಿಕ ಆ ಪಂಡಿತರು ಮಡಿವಾಳಸ್ವಾಮಿಯವರನ್ನು ಒಂದು ಬಹುದೊಡ್ಡ ಮನೆಯಲ್ಲಿ ಇಳಿಸಿದರು. ಆ ಮನೆಯು ನೋಡಲಿಕ್ಕೆ ಬಹು ಸೊಗಸಾದದ್ದೂ, ಇರಲಿಕ್ಕೆ ಪ್ರಶಸ್ತವಾದದ್ದೂ ಇತ್ತು. ಕೋಟ್ಯಾಧೀಶನಾದ ಸಾವುಕಾರನ ಮನೆಯು, ಕೇಳುವದೇನು? ಆ ರಮ್ಯವಾದ ಮನೆಯಲ್ಲಿ ನಮ್ಮ ಮಡಿವಾಳಸ್ವಾಮಿಗಳು ಆನಂದದಿಂದ ಇಳಕೊಂಡರು.

ಸ್ವಾಮಿಗಳು ಇಳಕೊಂಡ ಮನೆಯಲ್ಲಿ ಒಂದು ಬ್ರಹ್ಮರಾಕ್ಷಸವಿತ್ತು. ಅದರ ಉಪಟಳವನ್ನು ತಾಳಲಾರದೆ, ಆ ಮನೆಯ ಯಜಮಾನನು ಬೇರೊಂದು ಮನೆಯಲ್ಲಿ ಇರುತ್ತಿದ್ದನು. ಆ ಮನೆಯು ರಾಕ್ಷಸನ ಮನೆಯೆಂದು ಪ್ರಸಿದ್ಧವಾಗಿತ್ತು. ಆ ಮನೆಯ ಬಾಗಿಲ ಮುಂದೆ ಹಾಯಲಿಕ್ಕೆ ಸಹ ಜನರು ಅಂಜುತ್ತಿದ್ದರು. ಹೀಗಿರಲು, ಮೇಲೆ ಬರೆದಂತೆ ಮಡಿವಾಳಸ್ವಾಮಿಗಳು ಆ ಊರಿಗೆ ಬರಲು, ಅಲ್ಲಿಯ ಜನರು ಬೇಕೆಂತಲೇ ಅವರನ್ನು ಅಲ್ಲಿ ಇಳಿಸಿದರು. ಮಡಿವಾಳಸ್ವಾಮಿಗಳ ಯೋಗ್ಯತೆಯು ದೊಡ್ಡದಿರುವದರಿಂದ ಅವರ ಪುಣ್ಯದಿಂದ ರಾಕ್ಷಸನ ಕಾಟವು ತಪ್ಪಲೆಂದು ಆ ಜನರು ಆಲೋಚಿಸಿ ಈ ಹಂಚಿಕೆ ಮಾಡಿದ್ದರು.

ತಾವು ಇಳಕೊಂಡ ಮನೆಯಲ್ಲಿ ಬ್ರಹ್ಮರಾಕ್ಷಸವಿರುವದೆಂಬ ಮಾತು ಮಡಿವಾಳಪ್ಪನವರಿಗೆ ಗೊತ್ತಿರಲಿಲ್ಲ. ಜನರೂ ಹೇಳಲಿಲ್ಲ. ನಾಲ್ಕುತಾಸು ರಾತ್ರಿಯ ವರೆಗೆ ಎಲ್ಲ ಜನರು ಮಡಿವಾಳಪ್ಪನವರ ಸಂಗಡ ಮಾತಾಡುತ್ತ

ಕುಳಿತಿದ್ದು ಬಳಿಕ ಎಲ್ಲರೂ ಹೊರಟು ಹೋದರು. ಸ್ವಾಮಿಗಳು ಒಬ್ಬರೇ ಉಳಿದರು. ಆಗ ಅವರು ತಮ್ಮ ಕಂಟಲಿಯನ್ನು ಬಿಚ್ಚಿ ಒಂದು ವಸ್ತ್ರವನ್ನು ತೆಗೆದು ಹಾಸಿಕೊಂಡರು. ಬಳಿಕ ಗಂಟನ್ನು ತಲೆಗಿಂಬಿಗಿಟ್ಟುಕೊಂಡು ಮಲಗಿಕೊಂಡರು. ಮನೆಯಲ್ಲಿ ಎಲ್ಲ ಕಡೆಗೂ ಶಾಂತಿಯು ನೆಲೆಗೊಂಡಿತ್ತು. ಆಗ ಮಧ್ಯರಾತ್ರಿಯ ಸುಮಾರಕ್ಕೆ ಒಂದು ಬ್ರಹ್ಮರಾಕ್ಷಸವು ಮಡಿವಾಳಪ್ಪನವರ ಬಳಿಗೆ ಬಂದು ಗಹಗಹಿಸಿ ನಗಹತ್ತಿತು. ಆ ಸಪ್ಪಳಕ್ಕೆ ಎಚ್ಚತ್ತು ಸ್ವಾಮಿಗಳವರು ಕಣ್ಣು ತೆರೆಯಲು, ಮಿಣಿಮಿಣಿಸುವ ದೀಪದ ಮಂದಪ್ರಕಾಶದಲ್ಲಿ ಅಕರಾಳ ಸ್ವರೂಪದ ಬ್ರಹ್ಮರಾಕ್ಷಸವು ದೃಷ್ಟಿಗೆ ಬಿದ್ದಿತು. ಅದನ್ನು ಮಡಿವಾಳ ಸ್ವಾಮಿಗಳು ನೋಡಿ ಎದ್ದು ಕುಳಿತರು. ಸ್ವಾಮಿಗಳವರ ದೇದೀಪ್ಯಮಾನವಾದ ಸ್ವರೂಪವನ್ನು ನೋಡಿ ಬ್ರಹ್ಮರಾಕ್ಷಸವು ಬೆದರಿತು. ಅದು ಸಾಶಂಕ ಮನಸ್ಸಿನಿಂದ ನೋಡುತ್ತ ನಿಂತಿರಲು, ಮಡಿವಾಳಪ್ಪನವರು ಒಂದು ಪದವನ್ನು ಅಂದರು. "ಬಲ್ಲೆ ಹೋಗೆಲೇ ಪಾಪಿ ! ಸಲ್ಲದು ನಿನ್ನೀ ಬುದ್ಧೀ || ಇಲ್ಲಿ ನೀನಿರ ಸಲ್ಲದು | ಬಲ್ಲಲ್ಲಿಗೆ ಪೋಗೆ" || ಈ ಪ್ರಕಾರ ಪದವನ್ನು ಅಂದದ್ದು ಕೇಳಿ ಬ್ರಹ್ಮರಾಕ್ಷಸವು ತನ್ನ ಮನಸ್ಸಿನಲ್ಲಿ—ಈತನು ಯಾವನೋ ಮಹಾತ್ಮನಿರುವನೆಂಬಂತೆ ತೋರುತ್ತದೆ. ಇಲ್ಲಿ ನನ್ನ ಆಟವು ಸಾಗದು, ಎಂದು ಅಂದುಕೊಂಡು ಅದು ಕೂಡಲೇ ಮಡಿವಾಳಪ್ಪನವರಿಗೆ ಸಾಷ್ಟಾಂಗನಮಸ್ಕಾರವನ್ನು ಹಾಕಿತು; ಮತ್ತು ಮಹಾತ್ಮನೇ ನನ್ನನ್ನು ಉದ್ಧಾರಮಾಡೆಂದು ಬೇಡಿಕೊಂಡಿತು. ಆ ಬ್ರಹ್ಮರಾಕ್ಷಸನ ಪ್ರಾರ್ಥನೆಯನ್ನು ಕೇಳಿ ಮಡಿವಾಳಪ್ಪನವರಿಗೆ ಕರುಣ ಹುಟ್ಟಿತು. ಆಗ ಅವರು ಬ್ರಹ್ಮರಾಕ್ಷಸನನ್ನು ಕುರಿತು ನುಡಿದರೇನಂದರೆ— "ಎಲೈ ಬ್ರಹ್ಮಪಿಶಾಚಿಯೇ ಭಯಪಡಬೇಡ. ಜಗದೀಶನು ನಿನ್ನನ್ನು ಉದ್ಧರಿಸುವನು. ಸ್ವಲ್ಪ ದಿವಸಗಳಲ್ಲಿ ನೀನು ಈ ಪಿಶಾಚಜನ್ಮದಿಂದ ಮುಕ್ತನಾಗುವೆ. ಇಂದಿಗೆ ನಿನ್ನ ಸಂಚಿತ ದೋಷವು ನಾಶವಾಯಿತೆಂದು ತಿಳಿ."

ಸ್ವಾಮಿಗಳವರ ಮುಖದಿಂದ ಹೊರಟ ಈ ದಿವ್ಯವಾಣಿಯನ್ನು ಕೇಳಿ ಆ ಬ್ರಹ್ಮಪಿಶಾಚಿಯು ಅತ್ಯಾನಂದಪಟ್ಟಿತು. ಮರುದಿನ ಬೆಳಗಾದ ಮೇಲೆ ಊರೊಳಗಿನ ಜನರು ಮಡಿವಾಳಪ್ಪನವರನ್ನು ನೋಡಬಂದರು. ಮಡಿವಾಳಪ್ಪನವರು ಬದುಕಿ ಉಳಿದದ್ದನ್ನು ಕಂಡು ಅವರಿಗೆ ಪರಮಾನಂದವಾಯಿತು. ಆಗ ಮಡಿವಾಳಪ್ಪನವರು ಬಂದವರಿಗೆ ಬ್ರಹ್ಮರಾಕ್ಷಸನ ವೃತ್ತಾಂತವನ್ನು ಹೇಳಿದರು. ಅದನ್ನು ಕೇಳಿ ಆ ಮನೆಯ ಯಜಮಾನನು ಹರ್ಷಭರಿತನಾಗಿ, ಸ್ವಾಮಿಗಳವರಿಗೆ ಶರಣು

ಬಂದನು; ಅವನು ಸ್ವಾಮಿಗಳ ಚರಣವನ್ನು ಗಟ್ಟಿಯಾಗಿ ಹಿಡಿದು—ಸ್ವಾಮೀ, ನನ್ನ ಮೇಲೆ ಅನುಗ್ರಹ ಮಾಡಿ ನಮ್ಮ ಮನೆಯೊಳಗಿನ ಬ್ರಹ್ಮಪಿಶಾಚಿಯ ಬಾಧೆಯನ್ನು ತಪ್ಪಿಸಿ ನನ್ನನ್ನು ಸಂರಕ್ಷಿಸಬೇಕು, ಎಂದು ದೈನ್ಯದಿಂದ ಬೇಡಿಕೊಂಡನು. ಸ್ವಾಮಿಗಳವರು ಸಾವುಕಾರನಿಗೆ—ಅಪ್ಪಾ ಸಾವುಕಾರನೆ, ನಿನ್ನ ಮನೆಯೊಳಗಿನ ಬ್ರಹ್ಮರಾಕ್ಷಸವು ಹೋಗಬೇಕಾದರೆ ನೀನು ನಮ್ಮ ವಶಕ್ಕೆ ಹತ್ತು ಸಹಸ್ರ ರೂಪಾಯಿಗಳನ್ನು ಕೊಡು; ಅಂದರೆ ನಿನ್ನ ಇಷ್ಟದಂತೆ ಮಾಡುವೆವು ಎಂದರು; ಸಾವುಕಾರನು ಆ ಕೂಡಲೆ ಹತ್ತುಸಾವಿರ ರೂಪಾಯಿಗಳನ್ನು ತಂದು ಸ್ವಾಮಿಗಳ ಮುಂದೆ ಎಣಿಸಿದನು. ಆಗ ಸ್ವಾಮಿಗಳವರು ಒಬ್ಬ ಪುರಾಣಿಕರನ್ನು ಕರೆಯಿಸಿ ಆ ಸಾವುಕಾರನ ಮನೆಯಲ್ಲಿ ಸ್ಕಂದಪುರಾಣವನ್ನು ಹೇಳಿಸಿದರು; ಆ ಪುರಾಣ ಶ್ರವಣದಿಂದ ಬ್ರಹ್ಮರಾಕ್ಷಸವು ಉದ್ಧೃತವಾಗಿ ಪಿಶಾಚಿಜನ್ಮದಿಂದ ಮುಕ್ತವಾಯಿತು. ಒಳಿಕ ಮಡಿವಾಳಪ್ಪನವರು ಆ ಮನೆಯಲ್ಲಿ ದೊಡ್ಡ ಪ್ರಸ್ತವನ್ನು ಮಾಡಿಸಿ ಬಡಬಗ್ಗರನ್ನು ತೃಪ್ತಿಬಡಿಸಿದರು; ಸಾವಿರಾರು ಜನ ಜಂಗಮರು ಅಂದಿನ ಪ್ರಸ್ತದಲ್ಲಿ ಉಂಡು ಸಂತುಷ್ಟರಾದರು. ಮಡಿವಾಳಪ್ಪನವರ ವಶದಲ್ಲಿದ್ದ ೧೦ ಸಹಸ್ರ ರೂಪಾಯಿಗಳು ನೀರಿನಂತೆ ವೆಚ್ಚವಾಗಿ ಹೋದವು. ಅನಂತರ ಸ್ವಾಮಿಗಳವರು ಸಾವುಕಾರನಿಗೆ ಆ ಮನೆಯಲ್ಲಿರ ಹೇಳಿದರು. ಅಂದಿನಿಂದ ಆ ಮನೆಯಲ್ಲಿ ಸಾವುಕಾರನಿಗೆ ಯಾವ ಭಯವೂ ತಟ್ಟಲಿಲ್ಲ; ಮಡಿವಾಳಸ್ವಾಮಿಯವರ ಅನುಗ್ರಹದಿಂದ ನಮ್ಮ ಪೀಡೆಯು ಪರಿಹಾರವಾಯಿತೆಂದು ಸಾವುಕಾರನು ಅವರನ್ನು ಆನಂದದಿಂದ ಕೊಂಡಾಡಿದನು.

ಮುಂದೆ ಆ ಊರಲ್ಲಿ ಕೆಲವು ದಿವಸಗಳ ವರೆಗೆ ಇದ್ದು ಮಡಿವಾಳಪ್ಪನವರು ಅಲ್ಲಿಂದ ಹೊರಟರು. ಅವರು ಆಕಾಶಜಂಬರದ ರಮ್ಯಸ್ಥಾನವನ್ನು ನೋಡಿ ಬಹು ಆನಂದಪಟ್ಟು, ರಾಮೇಶ್ವರಕ್ಕೆ ನಡೆದರು. ಶ್ರೀ ರಾಮೇಶ್ವರ ಕ್ಷೇತ್ರವು ಶ್ರೀ ರಾಮನ ಕಾಲದಿಂದ ಬಹು ಪ್ರಸಿದ್ಧಕ್ಷೇತ್ರವೆನಿಸಿಕೊಂಡಿದ್ದು, ಆ ಮನೋಹರ ಪ್ರದೇಶವನ್ನು ನೋಡಿ, ಮಡಿವಾಳಸ್ವಾಮಿಗಳಿಗಾದ ಆನಂದವನ್ನು ಬಣ್ಣಿಸಲಾಸಲ್ಲ. ಪ್ರಾಚೀನ ಕಪಿಗಳ ಅತರ್ಕ್ಯ ಸಾಮರ್ಥ್ಯದ ಕುರುಹನ್ನು ಈಗ್ಯೂ ತೋರಿಸುತ್ತಿರುವ ಶ್ರೀ ರಾಮನ ಸೇತುವೆಯನ್ನು ಮಡಿವಾಳಪ್ಪನವರು ಬಹು ಕೌತುಕದಿಂದ ನೋಡಿದರು. ಸೃಷ್ಟಿನಿರೀಕ್ಷಣದ ಸಾಮರ್ಥ್ಯವು ನಮ್ಮ ಮಡಿವಾಳಪ್ಪನವರಲ್ಲಿ ಸ್ವತಃ ಸಿದ್ಧವಾಗಿ ವಾಸಮಾಡಿಕೊಂಡಿತ್ತು. ಅವರು ಪ್ರತಿಯೊಂದು ಸಂಗತಿಯನ್ನು ಸೂಕ್ಷ್ಮವಾಗಿ ವಿಚಾರಿಸದೆ ಎಂದೂ ಮುಂದಕ್ಕೆ

ಸಾಗುತ್ತಿದ್ದಿಲ್ಲ. ಹೀಗೆ ಅವರು ರಾಮೇಶ್ವರದ ಯಾತ್ರೆಯನ್ನು ಸಂಪೂರ್ಣವಾಗಿ ಮುಗಿಸಿಕೊಂಡು ಉತ್ತರಕ್ಕೆ ಹೊರಳಿ, ಭರತಭೂಮಾತೆಯ ಪಶ್ಚಿಮದಂಡೆ ಗುಂಟ ಸಾಗುತ್ತ ಶ್ರೀಗೋಕರಣಕ್ಷೇತ್ರಕ್ಕೆ ಬಂದು ತಲುಪಿದರು. ರಾಕ್ಷಸೇಶ್ವ ನಾದ ರಾವಣನ ಉಗ್ರತಪಸ್ಸಿಗೆ ಮೆಚ್ಚಿ ಶ್ರೀಶಂಕರನು ಕೊಟ್ಟ ಆತ್ಮಲಿಂಗವು ಈ ಪವಿತ್ರಸ್ಥಳದಲ್ಲಿಯೇ ಭೂಗತವಾದದ್ದನ್ನು ಕಣ್ಣಾರೆ ಕಂಡು, ಮಡಿವಾಳಪ್ಪನ ವರು ಧನ್ಯತೆಯನ್ನು ಪ್ರಕಟಿಸಿದರು. ಪರಮಾತ್ಮನ ಆತ್ಮಲಿಂಗದ [illegible] ಳಿದ ರಾವಣೇಶ್ವರನ ಉಪಕಾರವನ್ನು ಅವರು ಮನದಲ್ಲಿಯೇ [illegible]ಸಿದರು. ಬಳಿಕ ಅವರು ನೆಟ್ಟಗೆ ಉತ್ತರಕ್ಕೆ ಹೊರಟು ಹಾದಿಯಲ್ಲಿ ಎಲ್ಲಿಯೂ [illegible] ದಿವಸ ನಿಲ್ಲದೆ ಪುನಃ ಕಾಶಿಗೆ ಬಂದು ಮುಟ್ಟಿದರು.

---

ಎಂಟನೆಯ ಪ್ರಕರಣ.

## ರಾಜಸನ್ಮಾನವೂ—ಸಿದ್ಧಮಲ್ಲಾರ್ಯರ ಸಖ್ಯವೂ.



ಈ ಸಲ ಮಡಿವಾಳಪ್ಪನವರು ಪುನಃ ಕಾಶಿಗೆ ಬಂದು, ಅಲ್ಲಿ ಕೆಲವು ತಿಂಗಳು ಇದ್ದು, ಅಲ್ಲಿಂದ ಮುಂದೆ [illegible] ಜ್ಯಕ್ಕೆ ಪ್ರಯಾಣ ಬೆಳೆಸಿದರು. ಆ ನೇಪಾಳದ ಅರಸನು ಧಾರ್ಮಿಕನೂ, ಸಾಧುಸತ್ಪುರುಷರಲ್ಲಿ ಶ್ರದ್ಧೆಯುಳ್ಳವನೂ ಇದ್ದನು. ಅಂಥ ಅವನು ಮಡಿವಾಳಪ್ಪನವರ [illegible] ಅವರ ದರ್ಶನಕ್ಕಾಗಿ ತಾನೇ ಬಂದನು. ಆ ವೈಭವಸಂಪನ್ನರಾಜನು ಕೇವಲ ಭಕ್ತಿಪೂರ್ವಕವಾಗಿ ತಮ್ಮ ದರ್ಶನಕ್ಕೆ ಬಂದದ್ದನ್ನು ನೋಡಿ, ಮಡಿವಾಳಪ್ಪನವರು ಗಳು ಅವನಿಗೆ ಯಥೋಚಿತವಾಗಿ ಸನ್ಮಾನ ಮಾಡಿದರು. ರಾಜನು [illegible] ರನ್ನು ಕರಕೊಂಡು ರಾಜಧಾನಿಗೆ ನಡೆದನು. ಸ್ವಾಮಿಗಳ [illegible] ವೈರಾಗ್ಯವನ್ನು ನೋಡಿಯೂ, ಅವರ ದಿವ್ಯವೂ ಮಧುರವೂ [illegible] ವಾಣಿ ಯನ್ನು ಕೇಳಿಯೂ ರಾಜನಲ್ಲಿ ಭಕ್ತಿಯು ಹೆಚ್ಚಿತು, ಆಗ ಅವನು ಸ್ವಾಮಿಗಳವ ರನ್ನು ಭಕ್ತಿಪೂರ್ವಕವಾಗಿ ಸೇವಿಸಹತ್ತಿದನು. ಹೀಗೆ ಗುರುಭಕ್ತಿಯಿಂದ ನಡೆಯುಹತ್ತಿದ ಆ ರಾಜನು, ಒಂದು ಸುವರ್ಣಮಂಟಪವನ್ನು [illegible] ದ ರಲ್ಲಿ ಮಡಿವಾಳ ಗುರುಗಳನ್ನು ಕೂಡ್ರಿಸಿ ಪೂಜಿಸಿದನು. ದಿನಾಲು [illegible]

ಮಂಟಪದಲ್ಲಿಕುಳಿತು ಮಡಿವಾಳಸ್ವಾಮಿಗಳು ರಾಜನಿಂದ ಪೂಜಿಸಲ್ಪಡಹತ್ತಿದರು. ಆ ರಾಜನು ಮಡಿವಾಳಪ್ಪನವರಿಗೆ ಕೇವಲ ದಾಸಾನುದಾಸನಾಗಿ ನಡೆಯ ಹತ್ತಿದನು. ಮಹಾತ್ಮರ ಸೇವೆಯನ್ನು ಯಾರು ಕೈಕೊಳ್ಳಲಿಕ್ಕಿಲ್ಲ?

ಮುಂದೆ ಕೆಲವು ದಿವಸಗಳ ಮೇಲೆ ಮಡಿವಾಳಸ್ವಾಮಿಗಳು ಹಿಮಾಚಲಕ್ಕೆ ಹೋದರು. ಹಿಮಾಚಲದಂಥ ಅತಿಶಯ ಥಂಡಿಯ ಪ್ರದೇಶದಲ್ಲಿ ಅವರು ತಮ್ಮ ಯೋಗಬಲದಿಂದ ೫-೬ ತಿಂಗಳವರೆಗೆ ಇದ್ದರು. ಪ್ರತ್ಯಕ್ಷ ಮಂಜಿನ ಮನೆಯಾದ-ನೀರುಗಡ್ಡೆಗಟ್ಟುವ ಆ ಹಿಮಪರ್ವತದಲ್ಲಿ ವಾಸಮಾಡುವದು ಮನುಷ್ಯಮಾತ್ರರಿಗೆ ಸಲ್ಲತಕ್ಕದ್ದಲ್ಲ. ಇಂಥ ಪ್ರದೇಶದಲ್ಲಿಯೂ ಕೂಡ ನಮ್ಮ ಮಡಿವಾಳಸ್ವಾಮಿಗಳು ಹೋಗಿ ವಾಸಮಾಡಿಕೊಂಡಿದ್ದರೆಂಬದನ್ನು ಓದಿ ಯಾವ ಭಾರತೀಯನ ಹೃದಯವು ಭಕ್ತಿರಸದಿಂದ ತುಂಬಿಬರಲಿಕ್ಕಿಲ್ಲ. ಯಾವಾತನ ಹೃದಯವು ಸ್ವಾಮಿಗಳ ಪೂಜ್ಯತೆಗೆ ತನ್ನಲ್ಲಿ ಸ್ಥಾನವನ್ನು ಕೊಡಲಿಕ್ಕಿಲ್ಲ? ಇಂತು ಮಡಿವಾಳ ಸ್ವಾಮಿಗಳು ಹಿಮಾಲಯವನ್ನು ನೋಡಿಕೊಂಡು ಪುನಃ ನೇಪಾಳದ ರಾಜನಲ್ಲಿಗೆ ಬಂದರು. ಆಗ ಅವರು ಆ ರಾಜನಿಗೆ—ನೀನು ಈ ಬಂಗಾರದ ಮಂಟಪವನ್ನು ಯಾರ ಸಲುವಾಗಿ ಮಾಡಿಸಿರುವಿ? ಎಂದು ಕೇಳಲು, ರಾಜನು ನಿಮ್ಮ ಸಲುವಾಗಿ ಎಂದು ಉತ್ತರ ಕೊಟ್ಟನು. ಬಳಿಕ ಮಡಿವಾಳಪ್ಪನವರು ಶಿವಾರ್ಪಣವೆಂದು ನೀರು ಬಿಡು ಎಂದು ಹೇಳಲು ರಾಜನು ನೀರು ಬಿಟ್ಟನು. ಕೂಡಲೆ ಮಡಿವಾಳಪ್ಪನವರು ಅಕ್ಕಸಾಲಿಗನನ್ನು ಕರೆಯಿಸಿ, ಆ ಮಂಟಪವನ್ನು ಚೂರುಚೂರಾಗಿ ಮಾಡಿಸಿದರು? ನಂತರ ಅವರು ಊರೊಳಗಿನ ಬಡಬಗ್ಗರನ್ನೆಲ್ಲ ಕರೆಯಿಸಿ ಆ ಚೂರುಗಳನ್ನು ಅವರಿಗೆ ಹಂಚಿಕೊಟ್ಟುಬಿಟ್ಟರು.

ಬಳಿಕ ಮಡಿವಾಳಪ್ಪನವರು ಕಾಶ್ಮೀರಕ್ಕೆ ಹೋದರು. ಅಲ್ಲಿ ಒಬ್ಬ ಸಂಸ್ಥಾನಿಕನು ಅವರ ಶಿಷ್ಯನಾಗಿ ಅವರನ್ನು ಬಹು ವಿಧವಾಗಿ ಸತ್ಕರಿಸಿದನು. ನಂತರ ಮಡಿವಾಳಪ್ಪನವರು ಉತ್ತರ ಹಿಂದುಸ್ಥಾನದೊಳಗಿನ ಎಲ್ಲ ಸಂಸ್ಥಾನಗಳಿಗೆ ಹೋಗಿ ಅಲ್ಲಲ್ಲಿಯ ಪಂಡಿತರ ಕೂಡ ಚರ್ಜೆ ಮಾಡುತ್ತ ಆಯಾ ಸಂಸ್ಥಾನಾಧಿಪತಿಗಳಿಂದ ಒಳ್ಳೇ ಮಾನಮರ್ಯಾದೆಗಳನ್ನು ಹೊಂದಿದರು. ಪಂಡಿತರ ಕೂಡ ವಾದ-ವಿವಾದ ನಡೆಯಿಸುವದು ನಮ್ಮ ಮಡಿವಾಳಸ್ವಾಮಿಗಳಿಗೆ ಅವರ ಅತ್ಯಂತ ಪ್ರೀತಿಯ ಕೆಲಸಗಳಲ್ಲಿ ಒಂದಾಗಿತ್ತೆಂದು ಹೇಳಬಹುದು. ಆದರೆ ಹೇಳತಕ್ಕದ್ದಿಷ್ಟೇ; ವಾದದಲ್ಲಿ ಅನ್ಯರನ್ನು ಸೋಲಿಸಿ ಅವರ ಅಪಮಾನ ಮಾಡಬೇಕೆಂಬ

ದುರಿಚ್ಛೆಯು ಮಾತ್ರ ನಮ್ಮ ಮಡಿವಾಳಪ್ಪನವರಲ್ಲಿ ಇದ್ದಿಲ್ಲ. "ವಾದೇವಾದೇ ಜಾಯತೆ ತತ್ವ ಬೋಧಃ" ಎಂಬ ವಚನಾನುಸಾರವಾಗಿ ಅವರು ವಾದವಿವಾದದ ಕ್ರಮವನ್ನಿರಿಸಿದ್ದರು. ಸಜ್ಜನರು ಪರರ ಮನಸ್ಸನ್ನು ಯಾಕೆ ನೋಯಿಸುವರು! ಆ ಮಹಾತ್ಮರು ಜಗತ್ತೆಲ್ಲ ಈಶ್ವರಸ್ವರೂಪವೆಂದೇ ಭಾವಿಸುವರಲ್ಲವೆ?

ಬಳಿಕ ಮಡಿವಾಳಪ್ಪನವರು ಹೈದರಾಬಾದಕ್ಕೆ ಬಂದರು. ಅಲ್ಲಿಯ ಅರಸನಾದ ನಿಜಾಮನು ಮಡಿವಾಳಪ್ಪನವರ ಖ್ಯಾತಿಯನ್ನು ಕೇಳಿ, ಅವರನ್ನು ಅರಮನೆಗೆ ಕರಿಸಿಕೊಂಡನು. ಅವನು ಮಡಿವಾಳಸ್ವಾಮಿಗಳ ಯೋಗ್ಯತೆಯನ್ನು ಪರೀಕ್ಷಿಸಲಿಚ್ಛಿಸಿ ಒಂದು ಬಂಗಾರದ ತಾಟಿನಲ್ಲಿ ಗೋಮಾಂಸವನ್ನೂ, ಮತ್ತೊಂದು ತಾಟಿನಲ್ಲಿ ಫಲಗಳನ್ನೂ ಹಾಕಿ ಮೇಲೆ ಶುಭ್ರವಸ್ತ್ರವನ್ನು ಮುಚ್ಚಿ ಮಡಿವಾಳಸ್ವಾಮಿಗಳ ಬಳಿಗೆ ಕಳಿಸಿಕೊಟ್ಟನು. ನೆರೆದ ಸಭೆಯಲ್ಲಿ ರಾಜದೂತರು ಆ ತಾಟುಗಳೆರಡನ್ನೂ ಸ್ವಾಮಿಗಳ ಮುಂದಿರಿಸಿ, ನಿಂತುಕೊಂಡರು. ಮಡಿವಾಳಪ್ಪನವರು ರಾಜನ ಈ ಕೃತಿಯನ್ನು ಜ್ಞಾನದೃಷ್ಟಿಯಿಂದ ಬಲ್ಲವರಾದ್ದರಿಂದ ಆ ತಾಟುಗಳೆರಡನ್ನೂ ನೋಡಿ, ಅವುಗಳಿಗೆ, ತಮ್ಮ ಗುರುಗಳ ಹೆಸರನ್ನು ಉಚ್ಚರಿಸಿ ನೀರು ಸಿಂಪಡಿಸಿದರು. ಬಳಿಕ ಅವರು ತಮ್ಮ ಶಿಷ್ಯರಿಗೆ ಅವುಗಳ ಮೇಲಿನ ವಸ್ತ್ರಗಳನ್ನು ತೆಗೆಯಲಿಕ್ಕೆ ಹೇಳಿದರು. ಶಿಷ್ಯನು ಬಂದು ವಸ್ತ್ರಗಳನ್ನು ತೆಗೆಯಲು ಗೋಮಾಂಸದ ಬದಲು ಕೆಂಪು ದಾಸಾಳದ ಹೂವುಗಳು ಆ ತಾಟಿನಲ್ಲಿ ಮನೋಹರವಾಗಿ ಕಂಡವು. ಅದನ್ನು ಕಂಡು ಆ ರಾಜದೂತರು ಧಾವಿಸಿ ಹೋಗಿ ತಮ್ಮ ಒಡೆಯನಿಗೆ ತಿಳಿಸಿದರು. ಆಗ ನಿಜಾಮನು ಅನುತಾಪಯುಕ್ತನಾಗಿ ಮಡಿವಾಳಸ್ವಾಮಿಗಳಿಗೆ ಶರಣು ಬಂದನು. ಈ ಸುದ್ದಿಯು ಹಾ, ಹಾ, ಅನ್ನುವಷ್ಟರಲ್ಲಿ ಊರ ತುಂಬೆಲ್ಲ ಹಬ್ಬಿತು. ಜನರು ಮಡಿವಾಳಸ್ವಾಮಿಗಳ ದರ್ಶನಕ್ಕೆ ಬರಹತ್ತಿದರು. ಈಗಿನ ಕಾಲದಲ್ಲಿ ಚಮತ್ಕಾರಕ್ಕೆ ಬಳಗಾಗುವರೇ ಬಹಳ. ನಿಜಾಮನು ಸ್ವಾಮಿಗಳವರನ್ನು ಯಥಾಯೋಗ್ಯವಾಗಿ ಸನ್ಮಾನಿಸಿ ಅವರನ್ನು ಕೆಲವು ದಿನ ತಮ್ಮಲ್ಲಿ ಇಟ್ಟುಕೊಂಡನು. ಮುಂದೆ ಒಂದು ದಿನ ನಿಜಾಮನು ಮಡಿವಾಳಪ್ಪನವರ ಮುಂದೆ ಕೈ ಜೋಡಿಸಿ ನಿಂತುಕೊಂಡು ಸ್ವಾಮಿಾ, ನನ್ನಿಂದ ಏನಾದರೂ ಸೇವೆಯನ್ನು ಸ್ವೀಕರಿಸಬೇಕು, ಎಂದು ಬೇಡಿಕೊಂಡನು. ಮಡಿವಾಳಪ್ಪನವರು ಆ ರಾಜನಿಂದ ಕಪನಿ-ಕಿವಿಟೊಪ್ಪಿಗೆ, ಕಡಾವಿಗೆಗಳನ್ನಷ್ಟೇ ಬೇಡಿ ತಕ್ಕೊಂಡು ಅಲ್ಲಿಂದ ಹೊರಟು ಅಲ್ಲಲ್ಲಿ ತಿರುಗಾಡುತ್ತ ನಡೆದರು.

ಹೀಗೆ ದೇಶಸಂಚಾರ ಮಾಡುತ್ತ ಇರುತ್ತಿರಲು ಮಡಿವಾಳಪ್ಪನವರಿಗೆ ಮಕ್ಕಾಯಾತ್ರೆಗೆ ಹೋಗುವ ಇಚ್ಛೆಯಾಯಿತು, ಕೂಡಲೇ ಅವರು ಮಕ್ಕಾ ಯಾತ್ರೆಗೆ ಹೊರಟರು. ಸತ್ವಶಾಲಿಗಳು ಯಾವದಕ್ಕೂ ಅಂಜರು! ಅವರು ತಮ್ಮ ಸತ್ವದ ಯೋಗದಿಂದ ಬೇಕಾದದ್ದು ಮಾಡಬಲ್ಲರು. ಅದರಂತೆ ನಮ್ಮ ಮಡಿವಾಳಪ್ಪನವರಾದರೂ ತಮ್ಮಲ್ಲಿದ್ದ ದೃಢನಿಶ್ಚಯದ ಬಲದಿಂದ ಮಕ್ಕೆಯನ್ನು ಕಂಡು ಬಂದರು. ಮಕ್ಕೆಗೆ ಹೋಗುವಾಗ ಬರುವಾಗ ಆದ ಅನ್ನ ನೀರುಗಳ ತೊಂದರೆಯನ್ನೂ, ಒದಗಿದ ಅನೇಕ ಸಂಕಟಗಳನ್ನೂ ಅವರು ಸಮಾಧಾನದಿಂದ ಸಹಿಸಿಕೊಂಡರು. ತಾಪಸಹನವೇ ತಪಸ್ಸಲ್ಲವೇ?

ಮಕ್ಕೆಯಿಂದ ಮರಳಿ ಬಂದ ಮೇಲೆ ಮಡಿವಾಳಪ್ಪನವರಿಗೆ ಕಾಠೆವಾಡ ಪ್ರಾಂತದಲ್ಲಿ ಒಬ್ಬ ಸತ್ಪುರುಷರ ಭೆಟ್ಟಿಯಾಯಿತು. 'ಸಮಾನ ಶೀಲವ್ಯಸನೇಷು ಸಖ್ಯಂ' ಎಂಬ ಸುಭಾಷಿತಕಾರನ ಮತದಂತೆ ಅವರಿಬ್ಬರ ಗೋತ್ರವು ಬಹು ಬೇಗ ಕೂಡಿತು. ಹೀಗೆ ಮಡಿವಾಳಪ್ಪನವರಿಗೆ ಅಕಸ್ಮಾತ್ತಾಗಿ ಕೂಡಿದ ಆ ಸಾಧುಗಳು ಮೈಸೂರ ಪ್ರಾಂತದಲ್ಲಿರುವ ಬಾಣಾವರದವರು, ಅವರ ಹೆಸರು ಸಿದ್ಧಮಲ್ಲಾರ್ಯರು; ಇವರು ದೇಶಪರ್ಯಟನ ಮಾಡುತ್ತ ಕಾಠೆವಾಡ ಪ್ರಾಂತಕ್ಕೆ ಬಂದಿದ್ದರು. ಈ ದೊಡ್ಡ ಸತ್ಪುರುಷರ ದರ್ಶನವಾಗಲು ನಮ್ಮ ಮಡಿವಾಳ ಸ್ವಾಮಿಗಳಿಗೆ ಹಿಡಿಸಲಾರದಷ್ಟು ಆನಂದವಾಯಿತು. ಮುಂದೆ ಅವರಿಬ್ಬರ ಸ್ನೇಹವು ದಿನದಿನಕ್ಕೆ ಬೆಳೆಯುತ್ತ ನಡೆಯಿತು. ಅವರು ಬಹುಕಾಲದವರೆಗೆ ಒಬ್ಬ ರನ್ನೊಬ್ಬರು ಅಗಲದೆ ಇದ್ದು, ಅನೇಕ ಪ್ರಾಂತಗಳಲ್ಲಿ ಸಂಚರಿಸಿದರು. ಆ ಸಿದ್ಧ ಮಲ್ಲಾರ್ಯರ ಮೈತ್ರಿಯು ನಮ್ಮ ಮಡಿವಾಳಸ್ವಾಮಿಯವರಿಗೆ ಬಹು ಸುಖ ಕರವೆನಿಸಿತು.

ಸಿದ್ಧಮಲ್ಲಾರ್ಯರು ಮಡಿವಾಳಪ್ಪನವರಷ್ಟು ಓದಿಕೊಂಡವರಿದ್ದಿಲ್ಲ; ಆದರೆ ಅನುಭವಜನ್ಯವಾದ ಜ್ಞಾನವು ಅವರಲ್ಲಿ ಸಂಪೂರ್ಣವಾಗಿ ನೆಲೆಗೊಂಡಿತ್ತು; ಅವರ ಘನತರವಾದ ಯೋಗ್ಯತೆಯು ಮಡಿವಾಳಪ್ಪನವರ ಮನಸ್ಸನ್ನು ಆಕರ್ಷಿಸಿ ಬಿಟ್ಟಿತು. ಸಿದ್ಧಮಲ್ಲಾರ್ಯರಿಗೂ ಮಡಿವಾಳಸ್ವಾಮಿಯ ಪುಣ್ಯಾತಮವೃತ್ತಿ ಯನ್ನು ಕಂಡು ಬಲು ಸಮಾಧಾನವಾಯಿತು. ಹೀಗೆ ಅವರಿಬ್ಬರು ಇರುತ್ತಿ ರಲು ಸಿದ್ಧಮಲ್ಲಾರ್ಯರು ಮಡಿವಾಳಪ್ಪನವರೊಡನೆ ಬಾಣಾವರಕ್ಕೆ ಹೋದ- ರು. ಅಲ್ಲಿ ಕೆಲವು ದಿನಗಳ ವರೆಗೆ ಇದ್ದು, ಮಡಿವಾಳಪ್ಪನವರು ಪುನಃ ಉತ್ತರ ಹಿಂದುಸ್ಥಾನದ ಕಡೆಗೆ ಹೊರಟರು. ಅವರು ಸೊಗಲ ಗುಡ್ಡದ ಗವಿಯಲ್ಲಿ

ಬಹಳ ದಿವಸದ ವರೆಗೆ ಇದ್ದರು. ಮುಂದೆ ಅವರು ಉತ್ತರಹಿಂದುಸ್ಥಾನದಲ್ಲಿ ಕೆಲವು ದಿನ ಸಂಚರಿಸಿದರು. ಆಗ ಒಮ್ಮೆ ಮಥುರೆಯಲ್ಲಿ ಮಡಿವಾಳಪ್ಪನವರು ಒಂದು ಚಮತ್ಕಾರವನ್ನು ಮಾಡಿದರು.

ಮಥುರೆಯಲ್ಲಿ ಸಂತಮಂಡಲಿಯು ವಿಶೇಷವಾಗಿ ಕೂಡಿದ ಸಮಯದಲ್ಲಿ ಮಡಿವಾಳಪ್ಪನವರು ಅಲ್ಲಿಗೆ ಹೋದರು. ಆ ಸಂತರಲ್ಲಿಯು ಕೆಲವರು ಜ್ಞಾನವಲ್ಲಿಯ (ಗಾಂಜಿ) ಪರಮಭಕ್ತರಿದ್ದುದರಿಂದ ಅವರು ಅದನ್ನು ಸೇವಿಸುತ್ತ ಕುಳಿತಿದ್ದರು. ಮಡಿವಾಳಪ್ಪನವರು ಮೆಲ್ಲಗೆ ಆ ಜನರ ಹಿಂಡಿನಲ್ಲಿಸೇರಿ ತಮ್ಮದೊಂದು ಬಹುದೊಡ್ಡ ಬಲಿವೆಯನ್ನು ತೆಗೆದು ಅದರಲ್ಲಿ ಹದಮಾಡಿದ ಗಾಂಜೆಯನ್ನಿರಿಸಿ ಮೇಲೆ ಒಂದು ಸುಣ್ಣಮಣ್ಣಿಯ ಹರಳನ್ನು ಹೇರಿ, ಅದನ್ನು ಸೇದಿದರು. ಕೂಡಲೆ ಕಲ್ಲು ಹೊತ್ತಿ ಉರಿಯಲಾಯಿತು. ಈ ಅದ್ಭುತವನ್ನು ಕಂಡು ಜನರು ಬೆರಗಾಗಿ ಮಡಿವಾಳಪ್ಪನವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಮಡಿವಾಳಪ್ಪನವರಲ್ಲಿ ಅವರು ಪೂಜ್ಯಬುದ್ಧಿಯನ್ನು ವಹಿಸಿದರು. ಆಗ ಮಡಿವಾಳಪ್ಪನವರು ಆ ಜನರನ್ನು ಕುರಿತು—ಸಜ್ಜನರೇ, ನೀವು ಭಗವದ್‌ಭಕ್ತರಿರುತ್ತೀರಿ ಜಗದೀಶನ ನಾಮಸಂಕೀರ್ತನವೇ ನಿಮ್ಮ ನಿಜವಾದ ಸುಖವು. ಹೀಗಿದ್ದು ನೀವು ಈ ಜ್ಞಾನವಲ್ಲಿಯನ್ನು ಮಿತಿಯಿಲ್ಲದೆ ಸೇವಿಸಿ ಭ್ರಾಂತಿಗೀಡಾಗ ಬೇಡಿರಿ; ಎಂದು ಸದುಪದೇಶ ಮಾಡಿದರು. ಬಳಿಕ ಮಡಿವಾಳಪ್ಪನವರು ನೊಗಲವನ್ನೇ ತಮ್ಮ ವಾಸಸ್ಥಳವಾಗಿ ಮಾಡಿಕೊಂಡಿದ್ದರಿಂದ ಪುನಃ ಅಲ್ಲಿಗೇ ಬಂದರು. ಬಾಣಾವರಕ್ಕೂ ನೊಗಲಕ್ಕೂ ಬಹು ದೂರವಿದ್ದರೂ ಮಡಿವಾಳಪ್ಪನವರು ಸಿದ್ಧಮಲ್ಲಾರ್ಯರ ಭೆಟ್ಟಿಗೆ ಆಗಾಗ್ಗೆ ಹೋಗುತ್ತ ನಿಜಾನಂದದಲ್ಲಿ ಇದ್ದರು.

---

## ಒಂಬತ್ತನೆಯ ಪ್ರಕರಣ.

## ಶ್ರೀಚಿದಂಬರದೀಕ್ಷಿತರ ಸಂದರ್ಶನ.




ರೀತಿಯಾಗಿ ಮಡಿವಾಳಪ್ಪನವರು ಆಗಾಗ್ಗೆ ಸಿದ್ಧಮಲ್ಲಾರ್ಯರ ದರ್ಶನವನ್ನು ಹೊಂದುತ್ತ ಇರುತ್ತಿರಲು, ಅವರಿಗೆ ಶ್ರೀಚಿದಂಬರದೀಕ್ಷಿತರ ದರ್ಶನಾಪೇಕ್ಷೆಯು ಹೆಚ್ಚಿತು. ಕೂಡಲೆ ಅವರು ನೊಗಲವನ್ನು ಬಿಟ್ಟು ಮುರಗೋಡಿಗೆ ಬಂದರು. ಆಗ ಶ್ರೀಚಿದಂಬರದೀಕ್ಷಿತರು ಮುರಗೋಡದಲ್ಲಿ

ರುತ್ತಿದ್ದರು. ಒಂದು ದಿನ ಮುಂಜಾನೆ ದೀಕ್ಷಿತರು ಜ್ಞಾನಬೋಧ ಮಾಡುತ್ತ ಕುಳಿತಿರಲು ಮಡಿವಾಳಪ್ಪನವರು ಅಲ್ಲಿಗೆ ಬಂದರು. ಸುಹಾಸ್ಯವದನರೂ, ತೇಜೋಮಯರೂ ಆದ ದೀಕ್ಷಿತರ ಭವ್ಯಮೂರ್ತಿಯನ್ನು ನೋಡಿ, ಮಡಿವಾಳಪ್ಪನವರು ದೂರಿನಿಂದಲೇ ಸಾಷ್ಟಾಂಗ ನಮಸ್ಕಾರವನ್ನು ಹಾಕಿದರು. ಮಡಿವಾಳಪ್ಪನವರನ್ನು ನೋಡಿದ ಕೂಡಲೆ ದೀಕ್ಷಿತರು ಚಟ್ಟನೆ ಆಸನದಿಂದೆದ್ದು ಬಂದು, ಮಡಿವಾಳಪ್ಪನನ್ನು ಹಿಡಿದೆಬ್ಬಿಸಿ, ಗಟ್ಟಿಯಾಗಿ ಅಪ್ಪಿಕೊಂಡರು; ಆಗ ಪರಸ್ಪರರಿಗಾದ ಆನಂದವನ್ನು ಬಣ್ಣಿಸಲಾಸಲ್ಲ. ದೀಕ್ಷಿತರನ್ನು ಕಣ್ಣುತುಂಬಾ ನೋಡುವಾಗ ಮಡಿವಾಳಪ್ಪನವರಿಗೆ ತಾವು ಯಾರು? ದೀಕ್ಷಿತರು ಯಾರು? ಎನ್ನುವವದರ ಸ್ಮರಣವಾಗಿ ಅವರ ಕಣ್ಣುಗಳೊಳಗಿಂದ ಆನಂದಾಶ್ರುಗಳುದುರಹತ್ತಿದವು. ತಾವು ವೀರಭದ್ರನ ಅಂಶಸಂಭೂತರಿದ್ದು ದೀಕ್ಷಿತರು ಸಾಂಬನ ಅವತಾರಿಕರೆಂಬದು ನೆನಪಿಗೆ ಬಂದ ಕೂಡಲೆ ಮಡಿವಾಳಪ್ಪನವರಲ್ಲಿ ಪಿತೃಪ್ರೇಮವು ಉತ್ಪನ್ನವಾಯಿತು. ಬಹಳ ಹೊತ್ತಿನ ವರೆಗೆ ಅವರಿಬ್ಬರ ಮುಖದಿಂದ ಮಾತುಗಳೇ ಹೊರಡಲಿಲ್ಲ; ಪರಸ್ಪರರು ಮೂಕಭಾವದಿಂದ ಒಬ್ಬರನ್ನೊಬ್ಬರು ನೋಡುತ್ತ ಆನಂದಾತಿಶಯದಿಂದ ಸ್ತಬ್ಧರಾಗಿ ನಿಂತು ಬಿಟ್ಟರು. ಹೀಗೆ ಕೆಲವು ಹೊತ್ತು ಕ್ರಮಿಸಲು ದೀಕ್ಷಿತರು ಒಮ್ಮೆಲೆ ವತ್ಸಾ! ಎಂದು ನುಡಿದು ಮಡಿವಾಳಪ್ಪನವರ ಕೈಹಿಡಿದುಕೊಂಡು ಅವರೊಡನೆ ಏಕಾಂತವಾದದ್ದೊಂದು ಕೋಣೆಯಲ್ಲಿ ದಯಮಾಡಿಸಿದರು! ಹೀಗೆ ಆಕಸ್ಮಿಕವಾಗಿ ದಿಗಂಬರ ರೂಪದಿಂದ ಬಂದವರು ಯಾರು? ಎಂಬದನ್ನರಿಯದೆ ದೀಕ್ಷಿತರ ಸಭೆಯೊಳಗಿನ ಪಂಡಿತರು ತರ್ಕವಿತರ್ಕಗಳನ್ನು ನಡಿಸಿರಲು, ಒಳಗಿಂದ ದೀಕ್ಷಿತರೂ ಮಡಿವಾಳಪ್ಪನವರೂ ಹೊರಗೆ ಬಂದರು. ದೀಕ್ಷಿತರು ತಮ್ಮ ಆಸನದ ಮೇಲೆ ಕುಳಿತುಕೊಂಡರು. ದೀಕ್ಷಿತರ ಬಳಿಯಲ್ಲಿಯೇ ಮಡಿವಾಳಪ್ಪನವರು ಕುಳಿತುಕೊಂಡರು, ಬಳಿಕ ತಮ್ಮ ಸದ್ಬೋಧನಿರೂಪಣವನ್ನು ಮುಗಿಸಿ ಸಭೆಯಿಂದ ಎದ್ದರು; ಎಲ್ಲ ಜನರೂ ಎದ್ದರು. ಆಗ ನೆರೆದ ಪಂಡಿತರಿಗೆಲ್ಲ ಮಡಿವಾಳಪ್ಪನವರ ಪರಿಚಯವಾಯಿತು. ಪಂಡಿತರು ಗೀರ್ವಾಣಭಾಷೆಯಿಂದ ಪ್ರಶ್ನಮಾಡಲು, ಮಡಿವಾಳಪ್ಪನವರು ಗಂಭೀರವಾದ ತಮ್ಮ ವಾಣಿಯಿಂದ ಸಂಸ್ಕೃತಭಾಷೆಯಲ್ಲಿಯೇ ಉತ್ತರವನ್ನು ಕೊಟ್ಟರು. ಆ ಅಲ್ಪಭಾಷಣದಿಂದ ಮಡಿವಾಳಪ್ಪನವರ ಘನತರವಾದ ಯೋಗ್ಯತೆಯು ಅನುಭವವು ಎಲ್ಲರಿಗೂ ಬಂದಿತು. ಪಂಡಿತರೆಲ್ಲರು ಅವರನ್ನು ಗೌರವಿಸಹತ್ತಿದರು.

ಈ ಮೇರೆಗೆ ಮಡಿವಾಳಪ್ಪನವರು ದೀಕ್ಷಿತರ ಸಂದರ್ಶನಾನಂದವನ್ನು

ಹೊಂದಿ ಅಲ್ಲಿಯೇ ಇರತೊಡಗಿದರು. ಅವರು ದೀಕ್ಷಿತರಿಗೆ 'ಅಪ್ಪಾ' ಎಂದೆನ್ನುತ್ತಿದ್ದರು. ದಿನಾಲು ದೀಕ್ಷಿತರ ಸಭೆಯಲ್ಲಿ ಮುಡಿವಾಳಪ್ಪನವರು ವೇದಾಂತ ನಿರೂಪಣವನ್ನು ಮಾಡುತ್ತಿದ್ದರು. ಅವರ ಸರಸವಾದ ವಾಣಿಯಿಂದಲೂ, ನಿರೂಪಣದ ಒಳ್ಳೇ ಪದ್ಧತಿಯಿಂದಲೂ ಆ ಸಭೆಯಲ್ಲಿಯ ಜನರಿಗೆ ಪರಮಾನಂದವಾಗುತ್ತಿತ್ತು; ಹೀಗಿರಲು ಉತ್ತರದೇಶದಿಂದ ಒಬ್ಬರು ಪಂಡಿತರು ದಿಗ್ವಿಜಯಾರ್ಥವಾಗಿ ಮುರಗೋಡಿಗೆ ಬಂದರು. ಅವರು ಮುರಗೋಡದ ಬಳಿಯಲ್ಲಿರುವ ಸಿದ್ಧನಗವಿಯಲ್ಲಿ ಇಳಕೊಂಡು ದೀಕ್ಷಿತರಿಗೆ ತಮ್ಮ ಆಗಮನವನ್ನು ಕುರಿತು ಹೇಳಿ ಕಳಿಸಿದರು. ದೀಕ್ಷಿತರು ಪಂಡಿತರ ಗರ್ವ ಹರಣಮಾಡಲಿಚ್ಛಿಸಿ ಮುಡಿವಾಳಪ್ಪನನ್ನು ಕರೆದು—"ನೀವು ಸಿದ್ಧನಗವಿಗೆ ಹೋಗಿ ಪಂಡಿತರನ್ನು ಕರೆದುಕೊಂಡು ಇಲ್ಲಿಗೆ ಬನ್ನಿರಿ. ಪಂಡಿತರ ದರ್ಶನವಾದ ಬಳಿಕ ಅವರ ಗರ್ವಹರಣವಾಗುವಂತೆ ಏನಾದರೊಂದು ಹಂಚಿಕೆಯನ್ನು ಮಾಡಿರಿ; ಅವರ ಕೂಡ ವಾದಮಾತ್ರ ಮಾಡಬೇಡಿರಿ;" ಎಂದು ಅಪ್ಪಣೆ ಮಾಡಿದರು.

ಶ್ರೀ ದೀಕ್ಷಿತರ ಅಪ್ಪಣೆಯ ಪ್ರಕಾರ ಮುಡಿವಾಳಪ್ಪನವರು ಸಿದ್ಧನ ಗವಿಗೆ ಹೋದರು. ಅಲ್ಲಿ ಪಂಡಿತರ ದರ್ಶನವಾಯಿತು. ಬಳಿಕ ಮುಡಿವಾಳಪ್ಪನವರು ಪಂಡಿತರಿಗೆ ಯೋಗ್ಯ ಸನ್ಮಾನ ಮಾಡಿ ಶ್ರೀ ದೀಕ್ಷಿತರ ಆಮಂತ್ರಣವನ್ನು ತಿಳುಹಿಸಿದರು. ಮುಡಿವಾಳಪ್ಪನವರ ಸಮಾಚೀನವಾಗ ಗೀರ್ವಾಣವಾಣಿಯನ್ನು ಕೇಳಿ ಪಂಡಿತರು ಆಶ್ಚರ್ಯಪಟ್ಟು ಅವರನ್ನು ಎವೆಯಿಕ್ಕದೆ ನೋಡತೊಡಗಿದರು. ಆಗ ಮುಡಿವಾಳಪ್ಪನವರು ಪಂಡಿತರನ್ನು ಕುರಿತು—"ಪಂಡಿತರೇ, ನೀವು ಇಲ್ಲಿಗೆ ಏನು ನಿಮಿತ್ತವಾಗಿ ಬಂದಿರುವಿರಿ" ಎನಲು ಪಂಡಿತರು—ನಾನು ವಾದದಲ್ಲಿ ಜಯ ಸಂಪಾದಿಸಬೇಕೆಂದು ಬಂದಿರುವೆನು ಎಂದರು. ಅದಕ್ಕೆ ಮುಡಿವಾಳಪ್ಪನವರು ಹಾಗಾದರೆ ನೀವು ಏನು ವಾದವ ಮಾಡುವಿರಿ? ಎಂದು ಪುನಃ ಪ್ರಶ್ನ ಮಾಡಿದರು. ಇದನ್ನು ಕೇಳಿ ಪಂಡಿತನು ಒಳ್ಳೇ ಆವೇಶದಿಂದ—ನೀವು ಸತ್ಯವೆಂದು ಸಾಧಿಸುವ ಪೂರ್ವಪಕ್ಷವನ್ನು ನಾನು ಅಸತ್ಯವೆಂದು ಸಪ್ರಮಾಣವಾಗಿ ಸಿದ್ಧಮಾಡಿ ಕೊಡುವೆನು. ಎನಲು, ಮುಡಿವಾಳಪ್ಪನವರು ಮೆಲ್ಲಗೆ ಪೂರ್ವಪಕ್ಷವನ್ನಾರಂಭಿಸುವದನ್ನು ಯೋಚಿಸಿ—ಪಂಡಿತರೇ, ನಾನು ಒಂದು ಪೂರ್ವಪಕ್ಷವನ್ನು ಮಾಡುವೆನು ಉತ್ತರ ಕೊಡುವಿರಾ? ಎಂದು ಕೇಳಿದರು. ಪಂಡಿತರು ಓಹೋ ಎಂದು ಉತ್ತರ ಕೊಟ್ಟರು; ಬಳಿಕ ಮುಡಿವಾಳಪ್ಪನವರು ಪಂಡಿತರಿಗೆ—"ನೀವು ನಿಮ್ಮ ತಂದೆಯಿಂದಲೇ ಹುಟ್ಟಿರುತ್ತೀರೆಂದು ನಾನು ಪೂರ್ವಪಕ್ಷವನ್ನು ಸ್ಥಾಪಿ

ಸುತ್ತೀನೆ; ಇದಕ್ಕೆ ನಿಮ್ಮ ಉತ್ತರಪಕ್ಷವೇನು ಹೇಳಿರಿ; ಎಂದು ನುಡಿದರು ಮಡಿವಾಳಪ್ಪನವರ ಈ ಪೂರ್ವಪಕ್ಷದಿಂದ ಪಂಡಿತರು ನಿರುತ್ತರರಾದರು. ಅವರಿಗೆ ಉತ್ತರಪಕ್ಷಕ್ಕೆ ಆಸ್ಪದವೇ ಉಳಿಯಲಿಲ್ಲ. ಕಡೆಗೆ ಅವರು ನಾಚಿಕೊಂಡು ಇತಃಪರ ವಾದಮಾಡಬಾರದೆಂದು ನಿಶ್ಚಯಿಸಿ ಮಡಿವಾಳಪ್ಪನವರಿಗೆ ಶರಣು ಬಂದರು.

ಹೀಗೆ ಆ ಪಂಡಿತರ ಗರ್ವ ಹರಣಮಾಡಿ ಮಡಿವಾಳಪ್ಪನವರು ಅವರನ್ನು ದೀಕ್ಷಿತರ ಹತ್ತರ ಕರಕೊಂಡು ಬಂದರು. ದೀಕ್ಷಿತರು ಪಂಡಿತರನ್ನು ಅನುಗ್ರಹಿಸಿ ಕಳಿಸಿಕೊಟ್ಟರು. ಈ ಬಗೆಯಾಗಿ ಕುಶಲತೆಯನ್ನು ವ್ಯಕ್ತಪಡಿಸುತ್ತ ಮಡಿವಾಳಪ್ಪನವರು ಇರುತ್ತಿರಲು, ಶ್ರೀದೀಕ್ಷಿತರು ಯಜ್ಞಮಹೋತ್ಸವಕ್ಕಾಗಿ ಗೋಣಾಗರಕ್ಕೆ ಬಂದರು. ಚಿದಂಬರಮಹಾಸ್ವಾಮಿಯ ಯಜ್ಞಮಹೋತ್ಸವದ ವರ್ಣನೆಯನ್ನು ಕೇಳುವದೇನು? ದೊಡ್ಡ ದೊಡ್ಡ ಸಂಸ್ಥಾನಿಕರೂ ಶ್ರೀಮಂತರೂ ಬೇರೆ ಅನೇಕ ಜನರೂ ಒಗೆ ಒಗೆಯ ಸೇವೆಗಳನ್ನು ವಹಿಸಿಕೊಂಡಿದ್ದರು. ಒಂದು ದಿನ ಶ್ರೀದೀಕ್ಷಿತರು ಒಂದು ಬಹು ದೊಡ್ಡ ಸಭೆಯನ್ನು ಕೂಡಿಸಿದರು. ಯಜ್ಞಮಹೋತ್ಸವದಲ್ಲಿ ಯಾರು ಯಾರಿಗೆ ಯಾವ ಯಾವ ಕೆಲಸಗಳನ್ನು ಒಪ್ಪಿಸಬೇಕೆಂಬದೇ ಈ ಸಭೆಯ ಉದ್ದೇಶವಾಗಿತ್ತು. ಎಲ್ಲ ಕೆಲಸಗಳನ್ನು ವಿಂಗಡಿಸಿ ಹಂಚುವದಾದ ಬಳಿಕ ಕೋಠಿಯ ಕೆಲಸವನ್ನು ಯಾರಿಗೆ ಕೊಡಬೇಕು ಎಂಬ ಪ್ರಶ್ನೆಯುಂಟಾಯಿತು. ಆಗ ದೀಕ್ಷಿತರು—ಮಡಿವಾಳಪ್ಪನವರ ಹೊರತು ಅನ್ಯರಿಂದ ಕೋಠಿಯ ಕೆಲಸವಾಗದು ಎಂದು ನುಡಿದು ಪ್ರೇಮಪೂರ್ವಕವಾಗಿ ಮಡಿವಾಳಪ್ಪನವರಿಗೇ ಕೋಠಿಯ ಕೆಲಸವನ್ನು ಕೊಟ್ಟರು. ಲಕ್ಷಾಂತರ ಜನಸಮೂಹವು ಯಜ್ಞಮಹೋತ್ಸವಕ್ಕೆ ಕೂಡಿತು. ಮಹೋತ್ಸವವು ಒಳ್ಳೇಭರಕ್ಕೆ ಬಂದಿತು. ಹೀಗಿರಲು ಒಂದು ದಿನ ಅನ್ನಸಂತರ್ಪಣೆಗೆ ತುಪ್ಪವು ಕಡಿಮೆಯಾಯಿತು. ಆಗ ಚಿದಂಬರ ಮಹಾಸ್ವಾಮಿಯವರು ಮಡಿವಾಳಪ್ಪನನ್ನು ಕರೆದು ಮಲ್ಲಮ್ಮನಲ್ಲಿ(ಮಲಪ್ರಭಾನದಿ) ತುಪ್ಪ ಕಡ ತರಬೇಕೆಂದು ಹೇಳಿದರು. ಈ ಕೆಲಸಕ್ಕೆ ಮಡಿವಾಳಪ್ಪನವರು ತಾನೇ ಮುಂದುವರೆದು ಸಂಗಡ ನೂರಾರು ಜನ ಸೇವಕರನ್ನು ಕರಕೊಂಡು ನದಿಗೆ ಹೋಗಿ ಮಲಪ್ರಭೆಯನ್ನು ಸ್ತುತಿಸಿ ನೀರು ತುಂಬಿ ತರಲು ಅದು ತುಪ್ಪವಾಗಿ ಪರಿಣಮಿಸಿತು. ಈ ಸಂಗತಿಯನ್ನು ಮಡಿವಾಳಪ್ಪನವರು ತಮ್ಮ ಭಕ್ತಮಂಡಲಿಯ ಮುಂದೆ ಯಾವಾಗಲೂ ಬಹು ಕೌತುಕದಿಂದ ಹೇಳುತ್ತಿದ್ದರಂತೆ! ಮಡಿವಾಳಪ್ಪನವರು ಶ್ರೀ ಚಿದಂಬರ ಮಹಾಸ್ವಾಮಿಯಲ್ಲಿ ಬಹುಕಾಲ ವಾಸಮಾಡಿದರು. ಶ್ರೀ ಚಿದಂಬರ

ಮಹಾಸ್ವಾಮಿಯವರಿಗೆ ಆರು ಜನಮಕ್ಕಳು ಇದ್ದರು. ಅವರೆಲ್ಲರನ್ನು ಮಡಿವಾಳಪ್ಪನವರು ಏಕವಚನದಿಂದಲೇ ಕರೆಯುತ್ತಿದ್ದರು. ಚಿದಂಬರ ಮಹಾಸ್ವಾಮಿಯ ಮಕ್ಕಳಲ್ಲಿ ಒಬ್ಬರಾದ ಬಾಪೂ ದೀಕ್ಷಿತರ ಅದ್‌ಭುತ ಸಾಮರ್ಥ್ಯವನ್ನೂ ಅವರ ಶಾಪಾನುಗ್ರಹ ಶಕ್ತಿಯನ್ನೂ ನಮ್ಮ ಕರ್ನಾಟಕಸ್ಥರಲ್ಲಿ ಅನೇಕ ಜನರು ಬಲ್ಲರು. ಇಂಥ ಮಹಾತ್ಮರನ್ನು ಮಡಿವಾಳಪ್ಪನವರು 'ಬಾಪ್ಯಾ' ಎಂದು ಕರೆಯುತ್ತಿದ್ದರೆಂದ ಬಳಿಕ ಅವರ ಘನತರವಾದ ಯೋಗ್ಯತೆಯನ್ನೇನು ಬಣ್ಣಿಸುವದದೆ? ಚಿದಂಬರ ಮಹಾಸ್ವಾಮಿಯಲ್ಲಿ ಇದ್ದಾಗ ಮಡಿವಾಳಪ್ಪನವರು ಕೆಲವು ದಿನ ಸಿದ್ಧನ ಗವಿಯಲ್ಲಿ ಇರಬೇಕೆಂದು ಇಚ್ಛಿಸಿ ಅಲ್ಲಿ ಹೋಗಿ ನಿಂತರು. ಮುಂದೆ ಶ್ರಾವಣ ಮಾಸದಲ್ಲಿ ಮುರುಗೋಡದ ಶೆಟ್ಟರು ಬಹು ದೊಡ್ಡ ಗಣಾರಾಧನೆಯನ್ನು ಮಾಡಿದರು. ಸಮಸ್ತ ಗಣಂಗಳು ಬಂದು ಶೆಟ್ಟರ ಮನೆಯಲ್ಲಿ ಕುಳಿತರು. ಶೆಟ್ಟರಿಗೆ ಮಡಿವಾಳಪ್ಪನವರನ್ನು ಕರೆಯಬಾರದೆಂಬ ದುರ್ಬುದ್ಧಿಯು ಹುಟ್ಟಿತು. ಮಡಿವಾಳಪ್ಪನವರು ಎಲ್ಲರಲ್ಲಿಯೂ ಊಟಮಾಡುತ್ತಿರುವದರಿಂದ ಅವರು ಕುಲದಲ್ಲಿ ಇಲ್ಲವೆಂದು ತಿಳಿದರು. ಆದರೆ ಮಡಿವಾಳಪ್ಪನವರ ಘನತರವಾದ ಯೋಗ್ಯತೆಯು ಪರೀಕ್ಷೆಯು ಆ ಶೆಟ್ಟರಿಗೆ ಹ್ಯಾಗಾಗಬೇಕು? ಅವರು ಮಡಿವಾಳಪ್ಪನವರನ್ನು ತಿರಸ್ಕರಿಸಿ, ತಮ್ಮ ಗಣಾರಾಧನೆಯ ಕೆಲಸವನ್ನು ಸಾಗಿಸಬೇಕೆಂದು ಇಚ್ಛಿಸಲು, ಅಲ್ಲಿ ಒಂದು ಕೌತುಕವು ವರ್ತಿಸಿತು. ಅದು ಏನಂದರೆ—ಸೆಟ್ಟರ ಮನೆಯಲ್ಲಿ ಬಂದಿದ್ದ ಸಮಸ್ತ ಗಣಂಗಳು ಲಿಂಗಪೂಜೆಗಾಗಿ ತಮ್ಮ ತಮ್ಮ ಕೊರಳೊಳಗಿನ ವಸ್ತ್ರವನ್ನು ಬಿಚ್ಚಲು ಅಲ್ಲಿ ಏನಿದೆ? ಯಾರೊಬ್ಬರ ವಸ್ತ್ರದಲ್ಲಿಯೂ ಲಿಂಗವೇ ಇರಲಿಲ್ಲ. ಆಗ ಅವರು ಗಾಬರಿಯಾದರು. ಎಲ್ಲ ಕಡೆಗೂ ಖಿನ್ನತೆಯು ಪ್ರಕಟವಾಯಿತು. ಹೀಗೆ ಅಕಸ್ಮಿಕವಾಗಿ ಗಣಾರಾಧನೆಗೆ ವಿಘ್ನವು ಒದಗಿದ್ದನ್ನು ನೋಡಿ ಶೆಟ್ಟಿಯು ಬೆದರಿದನು; ಆಗ ಅಲ್ಲಿದ್ದ ಕೆಲವು ಭಾವಿಕ ಜನರು 'ಶೆಟ್ಟರೇ, ನೀವು ಮಡಿವಾಳಸ್ವಾಮಿಯವರನ್ನು ನಿಂದಿಸಿದ್ದರಿಂದ ಶಿವನಿಲ್ಲದ ದಕ್ಷನ ಯಜ್ಞದಂತೆ ನಿಮ್ಮ ಗಣಾರಾಧನೆಯು ಅಮಂಗಲವಾಗಿರುವದು. ಆದ್ದರಿಂದ ನೀವು ಮಡಿವಾಳಪ್ಪನವರಿಗೆ ಶರಣು ಹೋದ ಹೊರತು ಈ ಸಮಸ್ತ ಗಣಂಗಳಿಗೆ ಲಿಂಗವು ಪ್ರಾಪ್ತವಾಗಲಾರದು'' ಎಂದು ನುಡಿದರು.

ಬಳಿಕ ಶೆಟ್ಟರು ನಿರುಪಾಯರಾಗಿ ಮಡಿವಾಳಪ್ಪನವರ ಕಡೆಗೆ ಎಲ್ಲ ಗಣಂಗಳೊಡನೆ ಹೋದರು. ಆಗ ಮಡಿವಾಳ ಸ್ವಾಮಿಗಳು ಪದ್ಮಾಸನವನ್ನು ಹಾಕಿಕೊಂಡು ಕುಳಿತಿದ್ದರು. ಶೆಟ್ಟರು ಅವರ ಚರಣಗಳಿಗೆ ಪೊಡಮಟ್ಟು, ಸ್ವಾಮಿ!

ನನ್ನಿಂದ ಸರ್ವಾಪರಾಧವಾಯಿತು; ಬಡ ಜಂಗಮರು ಉಪವಾಸ ಸಾಯು ತ್ತಾರೆ ಕರುಣಿಸಬೇಕು ಎಂದು ಪ್ರಾರ್ಥಿಸಿದನು. ಕೋಮಲ ಹೃದಯರಾದ ಮಡಿವಾಳ ಸ್ವಾಮಿಗಳು ನಕ್ಕು—ನಮ್ಮ ಆಸನದ ಬುಡಕ್ಕೆ ಏನೋ ಒತ್ತುತ್ತವೆ ನೋಡಿರಿ; ಎಂದು ಹೇಳಿದರು. ಆಗ ಅವರ ಆಸನ ತೆಗೆದು ನೋಡಲು ಎಲ್ಲ ಜಂಗಮರ ಲಿಂಗಗಳು ಅಲ್ಲಿ ಇದ್ದವು. ಜನರಿಗೆ ಸಾನಂದಾಶ್ಚರ್ಯವಾಯಿತು. ಬಳಿಕ ಮಡಿವಾಳಪ್ಪನವರು ಆ ಜಂಗಮರ ಇಚ್ಛೆಯ ಪ್ರಕಾರ ತಾವೇ ತಮ್ಮ ಕೈಮುಟ್ಟಿ ಒಂದೊಂದು ಲಿಂಗವನ್ನು ಒಬ್ಬೊಬ್ಬರಿಗೆ ಕೊಟ್ಟರು. ಆ ಮೇಲೆ ಶೆಟ್ಟರು ಮಡಿವಾಳಪ್ಪನವರನ್ನು ಉತ್ಸವದಿಂದ ಕರೆಕೊಂಡು ನಡೆದರು. ಅವರ ಆರಾಧನೆಯ ಕೆಲಸವು ನಿರ್ವಿಘ್ನವಾಗಿ ಸಾಂಗವಾಯಿತು. ಆದ್ದರಿಂದ ಜಾಣ ರಾದವರು ಸತ್ಪುರುಷರನ್ನು ತಿರಸ್ಕರಿಸಬಾರದು.

---

ಹತ್ತನೆಯ ಪ್ರಕರಣ.

## ಹಲವು ಅಮಾನುಷ ಕೃತ್ಯಗಳು.




ಮೇರೆಗೆ ಮಡಿವಾಳಪ್ಪನವರು ಚಿದಂಬರ ದೀಕ್ಷಿತರ ದರ್ಶನ ಹಾಗು ಸಾನ್ನಿಧ್ಯದಸುಖವನ್ನು ಅನುಭವಿಸಿ ಕೆಂಗೇರಿಯನ್ನು ಬಿಟ್ಟು ಹೊರಟರು. ಅವರು ಗುರ್ಲಹೊಸೂರಿಗೆ ಬಂದು ಅಲ್ಲಿ ಕೆಲವು ದಿವಸಗಳ ವರೆಗೆ ಇದ್ದು, ವಕ್ಕುಂದಕ್ಕೆ ಹೋದರು. ಅಲ್ಲಿ ನಾಯ್ಕರ ಶಿವಲಿಂಗಪ್ಪನು ಸ್ವಾಮಿಗಳನ್ನು ಮನೆಯಲ್ಲಿಟ್ಟುಕೊಂಡು ಬಹು ಚನ್ನಾಗಿ ಸೇವೆ ಮಾಡಹತ್ತಿದನು. ಯಾವ ಕಾಲದಲ್ಲಿಯಾದರೂ ದುರ್ಜನರು ಇದ್ದೇ ಇರುವರು. ದುರ್ಜನರು ಇರು ತ್ತಿರುವದರಿಂದಲೇ ಸತ್ಪುರುಷರ ತೇಜಸ್ಸು ಹೊರಬೀಳುತ್ತದೆ. ತರಗಾರ ಶಿವ ಲಿಂಗಪ್ಪನು, ಹೂಗಾರ ಗಂಗಪ್ಪ ಇವರೇ ಮೊದಲಾದವರು ಠಕ್ಕತನದಿಂದ ಮಡಿವಾಳ ಸ್ವಾಮಿಗಳ ಸೇವೆಯನ್ನು ಮಾಡುತ್ತಿದ್ದರು. ಸ್ವಾಮಿಗಳು ಎಸರು ಬರು ವಂಥ ನೀರನ್ನು ಸ್ನಾನಮಾಡುತ್ತಿದ್ದರಾದ್ದರಿಂದ ಒಳ್ಳೇ ಎಸರು ಬರುವಂತೆ ನೀರು ಕಾಸಿ ಮಡಿವಾಳಪ್ಪನವರಿಗೆ ಒಮ್ಮೆ ಕೈ ತೋರಿಸಬೇಕೆಂದು ಈ ಠಕ್ಕರಿಬ್ಬರು ಮನಸ್ಸಿನಲ್ಲಿ ಯೋಚನೆ ಮಾಡಿದರು. ಎಸರು ಬರುವ ನೀರನ್ನು ನೂರು ಕೊಡಗಳ ವರೆಗೆ ಸ್ನಾನಮಾಡುತ್ತೇವೆಂದು ಸ್ವಾಮಿಗಳು ಬಣ ಡೌಲು

ತೋರಿಸುತ್ತಿರುವದಾದ್ದರಿಂದ ಅವರಿಗೆ ಒನ್ನೊಯಾದರೂ ಗಿಸಿಹತ್ತಿದ ಜೊರನು ಅವರ ಸೊಕ್ಕು ಮುರಿಯುವವಿಲ್ಲೆಂದು ಒಗೆದು ಅದರಂತೆ ಅವರು ಒಂದು ದಿವಸ ಕೊಪ್ಪರಿಗೆಯನ್ನಿಟ್ಟು ಒಳ್ಳೇ ಸಳಮುಳ ಅನ್ನುವಂತೆ ನೀರು ಕಾಸಿದರು. ಸ್ವಾಮಿಗಳು ಕೊಪ್ಪರಿಗೆಯ ಹತ್ತರ ಒಂದು ನಸುನಕ್ಕು, ಇನ್ನಿಷ್ಟು ಚನ್ನಾಗಿ ಕಾಸಿರೆಂದು ಕಟ್ಟಿಗೆ ಮೊದಲಾದವುಗಳನ್ನು ಒಲೆಯಲ್ಲಿ ಹಾಕಿದರು. ನೀರು ಚನ್ನಾಗಿ ಎಸರು ಬಂದು ಸಳಮುಳವೆಂದು ಗಟ್ಟಿಯಾಗಿ ಸಪ್ಪಳವಾಗಹತ್ತಿತು. ಅಷ್ಟರಲ್ಲಿ ಮಡಿವಾಳಪ್ಪನವರು ಸರ್ವಾಂಗದಲ್ಲೂ ಕ್ಷೌರ ಮಾಡಿಸಿಕೊಂಡು ಮೈಗೆ ಚನ್ನಾಗಿ ಎಣ್ಣೆ ಹಚ್ಚಿ ತಿಕ್ಕಿಸಿಕೊಂಡು ಅಲ್ಲಿಗೆ ಬಂದರು. ತಂಬಿಗೆಗಳಿಗೆ ಕೋಲು ಕಟ್ಟಿ ದೂರ ನಿಂತುಕೊಂಡು ಮಡಿವಾಳಸ್ವಾಮಿಗೆ ನೀರು ಹಾಕಹತ್ತಿದರು. ಸ್ವಾಮಿಗಳಿಗೆ ಅರ್ಧಮರ್ಧ ನೀರು ಹಾಕುವದಾಗಿತ್ತು; ತರಗಾರ ಶಿವ ಲಿಂಗಪ್ಪನ ಹತ್ತೀಕೋಣೆಗೆ ಬೆಂಕಿ ಹತ್ತಿದ ಸುದ್ದಿಯು ಬಂದಿತು; ಶಿವಲಿಂಗ ಪ್ಪನು ಗಡಬಡಿಸಿ ನೀರು ಹಾಕುವದನ್ನು ಬಿಟ್ಟು ಮನೆಯ ಕಡೆಗೆ ಓಡಿಹೋಗಲು ಹವಣಿಸ ಹತ್ತಿದನು. ಆಗ ಮಡಿವಾಳಸ್ವಾಮಿಯವರು ಅವನನ್ನು ನೋಡಿ — ಧೂ ಸೂಳೆಗಂಡಾ ಕೊಪ್ಪರಿಗೆಯಲ್ಲಿ ತಣ್ಣೀರು ಹಾಕು, ಅಂದರೆ ನಿನ್ನ ಹತ್ತೀ ಕೋಣೆಗೆ ಹತ್ತಿದ ಬೆಂಕಿಯು ನಂದುವದು. ಎಂದು ಹೇಳಿದರು. ಶಿವಲಿಂಗ ಪ್ಪನು ಅದರಂತೆ ಮಾಡಲು, ಅವನ ಮನೆಗೆ ಹತ್ತಿದ ಬೆಂಕಿಯು ಅಲ್ಲಿಂದಲ್ಲೇ ಆರಿಹೋಯಿತು. ಈ ಚಮತ್ಕಾರದಿಂದ ಶಿವಲಿಂಗಪ್ಪನು ತಾನು ಮಾಡಿದ ಅಪ ರಾಧಕ್ಕಾಗಿ ಪಶ್ಚಾತ್ತಾಪಪಟ್ಟು ಸ್ವಾಮಿಗಳ ಕ್ಷಮೆಯನ್ನು ಬೇಡಿಕೊಂಡನು. ಅಂದಿನಿಂದ ಆತನು ಮಡಿವಾಳಪ್ಪನವರು ಸಾಮಾನ್ಯರಲ್ಲವೆಂದು ಭಾವಿಸಿ ಪೂರ್ಣ ವಿಶ್ವಾಸದಿಂದ ನಡಕೊಳ್ಳಹತ್ತಿದನು.



ಒಮ್ಮೆ ಮಹಾಲಿಂಗಸ್ವಾಮಿಗಳೆಂಬವರು ಸಂಚಾರಮಾಡುತ್ತ ಮಡಿವಾಳಪ್ಪನವರ ಕಡೆಗೆ ಒಂದರು. ಮಡಿವಾಳಪ್ಪನವರು ಅವರಿಗೆ—ನೀವು ಯಾಕೆ ಬಂದಿರಿ? ಎಂದು ಕೇಳಿದರು. ಅದಕ್ಕೆ ಮಹಾಲಿಂಗಸ್ವಾಮಿಗಳು—ನನಗೆ ಒಂದು ಲಕ್ಷ ರೂಪಾಯಿಗಳು ಬೇಕು. ಯಾಚಕನಾಗಿ ನಿಮ್ಮ ಕಡೆಗೆ ಬಂದಿದ್ದೇನೆ ಎಂದು ನುಡಿದರು. ಮಡಿವಾಳಪ್ಪನವರು ನಸುನಕ್ಕು—ನಾನು ಬಡವನು, ಲಕ್ಷ ರೂಪಾಯಿಕೊಡುವ ಸಾಮರ್ಥ್ಯವು ನನಗೆಲ್ಲಿಂದ ಬರಬೇಕು? ನೀವು ಚಿತ್ರ ಕಲ್ಲದುರ್ಗಕ್ಕೆ ಈಗಿಂದೀಗಲೆ ಹೊರಟು ಹೋದರೆ ಸ್ವಾಮಿಯು ನಿಮಗೆ ಚನ್ನಾಗಿ

ಕಲ್ಯಾಣಮಾಡುವನು. ಎಂದು ಹೇಳಿದರು. ಮಹಾಲಿಂಗಸ್ವಾಮಿಗಳಿಗೆ ಮಡಿವಾಳಪ್ಪನವರ ಮೇಲೆ ವಿಶ್ವಾಸವಿದ್ದದರಿಂದ ಅವರು ತಡಮಾಡದೆ ಚಿತ್ರದುರ್ಗಕ್ಕೆ ಹೊರಟರು. ಅವರು ಅಲ್ಲಿಗೆ ಮುಟ್ಟುವಷ್ಟರಲ್ಲಿ, ಅಲ್ಲಿಯ ಮುರಘಾರಾಜೇಂದ್ರಸ್ವಾಮಿಗಳು ಲಿಂಗೈಕ್ಯರಾಗುವವರಿದ್ದು ಮುಂದೆ ಪಟ್ಟಕ್ಕೆ ಯೋಗ್ಯರಾರೆಂದು ಯೋಚಿಸುತ್ತಿದ್ದರು. ಮಹಾಲಿಂಗಸ್ವಾಮಿಗಳು ಅಕಸ್ಮಾತ್ತಾಗಿ ಹೋಗಲು ಇವರನ್ನು ಕಂಡು ಆ ಮುರಘಾರಾಜೇಂದ್ರಸ್ವಾಮಿಗಳವರು ಪರಮಾನಂದಬಟ್ಟು ಮಹಾಲಿಂಗಸ್ವಾಮಿಗಳವರನ್ನೇ ತಮ್ಮ ಪಟ್ಟಕ್ಕೆ ಬಾಧ್ಯಸ್ಥರನ್ನಾಗಮಾಡಿ ಬಿಟ್ಟರು.

● § ● § ●

ವಕ್ಕುಂದದ ಶಿವಲಿಂಗಪ್ಪನಾಯಿಕನ ಹೊಲದಲ್ಲಿ ಹಿರಿಯರಿಂದ ಹೂಳಿಡಲ್ಪಟ್ಟ ದ್ರವ್ಯವನ್ನು ಕಳ್ಳರು ಒಂದು ದಿನ ಮಧ್ಯರಾತ್ರಿಯಲ್ಲಿ ಎಬ್ಬಿಸುತ್ತಿದ್ದರು. ಆ ದಿವಸ ಮಡಿವಾಳಪ್ಪನವರು ನಡುರಾತ್ರಿಯಲ್ಲಿಯೇ ಎದ್ದು, ಶಿವಲಿಂಗಪ್ಪನನ್ನು ಎಚ್ಚರಗೊಳಿಸಿ—ನೀನು ನಿಮ್ಮ ಬನ್ನೀಮರದ ಹೊಲಕ್ಕೆ ಹತ್ತೆಂಟು ಮಂದಿಯನ್ನು ಕರಕೊಂಡು ಈಗಲೇ ಹೋಗು, ಎಂದು ಹೇಳಿದರು. ಶಿವಲಿಂಗಪ್ಪನು ವಿಶ್ವಾಸಿಕರಾದ ೮-೧೦ ಜನರನ್ನು ಕರಕೊಂಡು ಹೊಲಕ್ಕೆ ಹೋದನು. ಕಳ್ಳರು ಹೊನ್ನುತುಂಬಿದ ತಪ್ಪೇಲಿಯನ್ನು ಇನ್ನು ಹೊತ್ತುಕೊಂಡು ಹೋಗುವವರಿದ್ದು, ಈ ಜನರನ್ನು ನೋಡಿದ ಕೂಡಲೆ ಗಾಬರಿಯಾಗಿ ಅದನ್ನು ಬಿಟ್ಟು ಓಡಿ ಹೋದರು. ಶಿವಲಿಂಗಪ್ಪನು ಆ ತಪ್ಪೇಲಿಯನ್ನು ನೋಡಿ ಸಂತೋಷಬಟ್ಟು ಮನಸ್ಸಿನಲ್ಲಿ ಮಡಿವಾಳಸ್ವಾಮಿಯನ್ನು ಕೊಂಡಾಡುತ್ತ ಮನೆಗೆ ಹೊರಿಸಿಕೊಂಡು ಬಂದು, ನಡೆದ ಸಂಗತಿಯನ್ನು ಮಡಿವಾಳಪ್ಪನವರ ಮುಂದೆ ಹೇಳಿದನು. ಆಗ ಅವರು ಸಂತೋಷದಿಂದ—ಶಿವಲಿಂಗಾ, ನಿನ್ನ ದೈವವು ಚಲೋದು ಅದೆ; ಅಂತೇ ನಿನಗೆ ಈ ನಿಕ್ಷೇಪವು ಸಿಕ್ಕಿತು. ಬಡಬಗ್ಗರ ಪರಾಮರಿಕೆಯನ್ನು ತಕ್ಕೊಳ್ಳುತ್ತ ಸುಖದಿಂದ ಸಂಸಾರ ಮಾಡು; ಎಂದು ಹೇಳಿದರು.

● * * * * *

ಮಲಾಪಹಾರೀ ತೀರದಲ್ಲಿರುವ ಒಂದು ಊರಲ್ಲಿ ಮಡಿವಾಳಪ್ಪನವರು ಕೆಲವು ದಿವಸ ವಸ್ತೀಮಾಡಿದರು. ಅಲ್ಲಿ ಒಬ್ಬ ನಾವಲಿಗನು ಇವರಿಗೆ ಶರಣು ಬಂದನು. ನಾವಲಿಗನ ಭಕ್ತಿಯನ್ನು ನೋಡಿ ಮಡಿವಾಳಪ್ಪನವರು ಬಹುಸಂತೋಷಪಡುತ್ತಿದ್ದರು. ಹೀಗಿರಲು ಒಂದು ದಿನ ಮಧ್ಯರಾತ್ರಿಯಲ್ಲಿ ಮಡಿವಾಳಪ್ಪನ

ವರು ಮಹಾಬಲೇಶ್ವರ-ಮಹಾಬಲೇಶ್ವರ ಎಂದು ನಾಮಗರ್ಜನೆಯನ್ನು ಮಾಡು ತ್ತ ಆ ಊರನ್ನು ಬಿಟ್ಟು ಹೊರಟರು. ಮುಡಿವಾಳಪ್ಪನವರ ದನಿಯು ಗುರ್ತು ಹಿಡಿದು ಆ ನಾವಲಿಗನ ಹೆಂಡತಿಯು ಬಾಗಿಲ ತೆಗೆದು ನೋಡಿದಳು. ಮುಡಿವಾ ಳಪ್ಪನವರು ಮಲಪ್ರಭಾ ತೀರದ ಕಡೆಗೆ ಹೋಗುತ್ತಿದ್ದರು. ಆಗ ಆಕೆಯು ಅವಸರದಿಂದ ಒಳಗೆ ಹೋಗಿ ಗಂಡನನ್ನು ಎಬ್ಬಿಸಿ—ಸ್ವಾಮಿಗಳು ಒಬ್ಬರೇ ನದಿಗೆ ಹೊರಟಿದ್ದಾರೆ ಎಂದು ಹೇಳಿದಳು. ಅದನ್ನು ಕೇಳಿ ಆ ನಾವಲಿಗನು ನದಿಯು ಕಡೆಗೆ ಓಡಿದನು. ನದಿಯು ಮಹಾಪೂರ ಬಂದಿತ್ತು. ಮುಡಿವಾಳಪ್ಪನವರು ಮಾತ್ರ ನದೀದಾಟಿ ಆಚೆಯ ದಂಡೆಯಮೇಲೆ ಭಜನೆ ಮಾಡುತ್ತ ಕುಳಿತಿದ್ದರು, ಅದನ್ನು ಕಂಡು ನಾವಲಿಗನು ವಿಸ್ಮಯಪಟ್ಟು ತಿರುಗಿ ಊರೊಳಗೆ ಹೋಗಿ ಅಂಬಿಗರನ್ನು ಎಬ್ಬಿಸಿ, ಅವರನ್ನೂ ಊರೊಳಗಿನ ಕೆಲವು ಜನರನ್ನೂ ಕರಕೊಂಡು ಹರಗೋಲಿನ ಸಹಾಯದಿಂದ ನದಿಯನ್ನು ದಾಟಿ ಮುಡಿವಾಳ ಸ್ವಾಮಿಗಳ ಮುಂದೆ ಹೋಗಿ ನಮಸ್ಕಾರಮಾಡಿ ನಿಂತುಕೊಂಡನು. ತಾವು ನಿವಾಂತಸ್ಥಳದಲ್ಲಿ ಭಜನೆ ಮಾಡುತ್ತ ಕುಳಿತಿರಲು, ಈ ಜನರು ಬಂದು ಗದ್ದಲಮಾಡಿದ್ದನ್ನು ನೋಡಿ ಮುಡಿ ವಾಳಪ್ಪನವರು ಸಿಟ್ಟಿಗೆದ್ದು ಬಂದವರಿಗೆ ಬಾಯಿಗೆ ಬಂದಹಾಗೆ ಬೈದರು. ಅಭಾ ವಿಕರೂ, ದುರಭಿಮಾನಿಗಳೂ ಆದ ಆ ಜನರು ಮುಡಿವಾಳಪ್ಪನವರು ಬೈದದ್ದನ್ನು ಕೇಳಿ ಅಲ್ಲಿ ಕ್ಷಣಮಾತ್ರ ಸಹ ನಿಲ್ಲದೆ ತಿರುಗಿ ಹೊರಟುಹೋದರು. ಆದರೆ ಭಾವಿ ಕನಾದ ನಾವಲಿಗನು ಮಾತ್ರ ಹೋಗಲಿಲ್ಲ. ಅವನು ಸ್ವಾಮಿಗಳ ಮೇಲೆ ಗುಡಾ ರವನ್ನು ಹೊಡೆದು ಅವರಿಗೆ ಮಳೆ, ಗಾಳಿಗಳು ಬಡೆಯದಂತೆ ರಕ್ಷಣೆ ಮಾಡುತ್ತ ನಿಂತುಕೊಂಡನು. ನಾವಲಿಗನು ತಮ್ಮ ಮೇಲೆ ಪೂರ್ಣಭಕ್ತಿಯನ್ನಿಟ್ಟದ್ದಕ್ಕೆ ಸಂತೋಷಬಟ್ಟು ಮುಡಿವಾಳಪ್ಪನವರು ಆ ನಾವಲಿಗನನ್ನು ಕುರಿತು—ತಮ್ಮಾ ಶಿವರುದ್ರಾ, ನೋಡಿದೆಯಾ ಜನರ ಸ್ವಭಾವವನ್ನ! ಸೂಳೇಗಂಡರು ಹಾಳಾಗಿ ಹೋಗಲಿ ಬಿಡು; ನಾವು ಮುಸೆಪ್ಪನ ಗುಡಿಗೆ ಹೋಗೋಣನಡೆ" ಎಂದು ಹೇಳಿ ಅವನೊಡನೆ ಆ ಗುಡಿಗೆ ನಡೆದರು.

ಮುಂದೆ ೨ ದಿವಸಗಳ ಮೇಲೆ ದೊಡ್ಡ ಮಳೆಯಾಗಿ ಮಲಾಪಹಾರಿಯು ಮೇರೆದಪ್ಪಿ ಹರಿಯಹತ್ತಿತು. ಹಳ್ಳಕೊಳ್ಳಗಳು ತುಂಬಿನಿಂತು ಮುಡಿವಾಳಪ್ಪ ನವರು ಇದ್ದ ಗುಡಿಯೊಳಗೆ ಸಹ ನೀರು ಹೊಕ್ಕವು. ಎತ್ತರದ ಗುಡಿಯೊಳಗೇ ನೀರು ಹೊಕ್ಕಿರಲು ಆ ಊರ ಅವಸ್ಥೆಯನ್ನು ಕೇಳುವವರಾರು? ಅರ್ಧಊರು ಮುಣುಗಲಿಕ್ಕೆ ಬಂದಿತು. ಊರ ಜನರು ಗಾಬರಿಯಾಗಿ ಮುಡಿವಾಳಪ್ಪನವರ

ಕಡೆಗೆ ಶರಣು ಬಂದರು. ಆ ಜನರ ದೈನ್ಯವಾಣಿಯಿಂದ ಮಡಿವಾಳಪ್ಪನವರಿಗೆ ದಯುಹುಟ್ಟಿ, ಅವರು ಒಂದು ಟೆಂಗಿನಕಾಯಿಯನ್ನು ಒಡೆದು ನದಿಯಲ್ಲಿ ಬಿಟ್ಟರು; ಕೂಡಲೆ ನೀರು ಮತ್ತಿಷ್ಟು ಏರಿ ನಡುಮಟ ಬಂದಿತು. ಆಗ ಮತ್ತೊಂದು ಕಾಯಿಯನ್ನು ತಕ್ಕೊಂಡು ಮಲ್ಲಮ್ಮತಾಯಿಗೆ 'ಜಯ ಜಯಕಾರ' ಎಂದು ನುಡಿದು ಅದನ್ನು ನೀರಲ್ಲಿ ತೇಲಿಬಿಟ್ಟರು. ನದಿಯು ಝರ್ರನೆ ಇಳಿದು ಪಾತ್ರೆಯ ಒಳಕ್ಕೆ ಸೇರಿಕೊಂಡಿತು. ಊರವರು ಸಂತೋಷಪಟ್ಟು ಮಡಿವಾಳಪ್ಪನವರ ಹೇಳಿಕೆಯ ಮೇರೆಗೆ ಮುಸಪ್ಪದೇವರಿಗೆ ಪ್ರಸ್ತಮಾಡಿದರು.

* * * * *

ಆ ನಂತರ ಮಡಿವಾಳಪ್ಪನವರು ತಡಕೋಡ ಗ್ರಾಮಕ್ಕೆ ಬಂದರು. ಅಲ್ಲಿ ರಾಮಭಟ್ಟ, ನರಸಿಂಹಭಟ್ಟರೆಂಬ ಬ್ರಾಹ್ಮಣರು ಸ್ವಾಮಿಗಳವರನ್ನು ಸನ್ಮಾನಿಸಿ ತಮ್ಮ ಮನೆಗೆ ಕರಕೊಂಡು ಹೋದರು. ಮಡಿವಾಳಪ್ಪನವರು ಶಾಸ್ತ್ರಾರ್ಥ ವನ್ನು ಬೋಧಿಸುತ್ತ ರಾಮಭಟ್ಟರ ಮನೆಯಲ್ಲಿ ಕೆಲವು ದಿವಸಗಳವರೆಗೆ ಇದ್ದರು. ಅವರ ಊಟ ಉಪಚಾರವೆಲ್ಲ ರಾಮಭಟ್ಟರ ಮನೆಯಲ್ಲಿಯೇ ಜರಗುತ್ತಿತ್ತು. ಹೀಗಿರಲು ರಾಮಭಟ್ಟರ ಮನೆಯಲ್ಲಿ ಪಿತೃಶ್ರಾದ್ಧವು ಬಂದಿತು. ಪರಸ್ಥಳಗ ಳಿಂದ ಬ್ರಾಹ್ಮಣರು ಬಂದರು. ಆಗ ಬ್ರಾಹ್ಮಣರೆಲ್ಲರೂ ಕೂಡಿ—ಎಲ್ಲರ ಊಟವಾದ ಬಳಿಕ ಮಡಿವಾಳ ಸ್ವಾಮಿಗೆ ಊಟಕ್ಕೆ ಬಡಿಸಬೇಕೆಂದು ನಿಶ್ಚಯಿ ಸಿದರು, ಮಧ್ಯಾಹ್ನವಾದ ಬಳಿಕ ರಾಮಭಟ್ಟರು ಸ್ನಾನಕ್ಕಾಗಿ ಎದ್ದು, ಅಡಿ ಗೆಯು ಎಲ್ಲಿಗೆ ಬಂದಿದೆಯೆಂಬದನ್ನು ನೋಡುವದಕ್ಕಾಗಿ ಅಡಿಗೆಯ ಮನೆಯೊ ಳಗೆ ಹೋದರು. ಆಗ ಅವರಿಗೆ ಹೋಳಿಗೆಯ ರಾಶಿಯಮೇಲೆ ಕುರಿಯ ತಲೆಯು ಇದ್ದಂತೆ ಕಾಣಿಸಿತು. ರಾಮಭಟ್ಟರು ಘಾತವಾಯಿತೆಂದು ಅನ್ನುತ್ತ ಮಡಿವಾ ಳಸ್ವಾಮಿಗಳ ಸನ್ನಿಧಿಗೆ ಹೋಗಿ ನಡೆದ ಸಂಗತಿಯನ್ನು ವಿಜ್ಞಾಪಿಸಿಕೊಂಡರು. ಸ್ವಾಮಿಗಳವರು ನಕ್ಕು—ರಾಮಭಟ್ಟಾ, ಏನೂ ಚಿಂತೆಮಾಡಬೇಡ ಹೋಗು; ಬಾಳೇಹಣ್ಣಿನ ಹಣಿಗೆಯಾಗಿದ್ದೀತು. ಸುಮ್ಮನೆ ವಿಕಲ್ಪಕ್ಕೆ ಗುರಿಯಾಗಬೇಡ. ಎಂದು ಹೇಳಿಕಳಿಸಿದರು. ರಾಮಭಟ್ಟರು ಪುನಃ ಅಡಿಗೆಯ ಮನೆಗೆ ಬಂದು ನೋಡಲು, ಸ್ವಾಮಿಗಳು ಹೇಳಿದಂತೆ ಅದು ಬಾಳೇಹಣ್ಣಿನ ಹಣಿಗೆಯಾಗಿತ್ತು. ಅದನ್ನು ನೋಡಿ ರಾಮಭಟ್ಟರಿಗೆ ಪರಮ ಸಂತೋಷವಾಯಿತು. ಕೂಡಿದ ಬ್ರಾಹ್ಮಣರಿಗೂ ಮಡಿವಾಳಪ್ಪನವರ ಯೋಗ್ಯತೆಯು ಚನ್ನಾಗಿ ಗೊತ್ತಾಯಿತು. ಅವರಿಗೆ ಮಡಿವಾಳಪ್ಪನವರ ಪವಿತ್ರತೆಯ ಬಗ್ಗೆ ಬಂದ ಸಂಶಯವು ಸಂಪೂರ್ಣ

ವಾಗಿ ದೂರಾಯಿತು. ಆಗ ಅವರು ನಿಶ್ಚಯಿಸಿದ್ದೇನಂದರೆ—ದುರಭಿಮಾನಿಗಳ ಕಣ್ಣಿಗೆ ಮಾತ್ರ ಮಡಿವಾಳಪ್ಪನವರು ಕುರಿಯ ತಲೆಯಂತೆ ಅಪವಿತ್ರರಾಗಿ ಕಾಣಿಸುವರು. ಆದರೆ ನಿರ್ಮಲ ಮನಸ್ಸಿನವರಿಗೆ ಅವರು ಬಾಳೇಹಣ್ಣಿನ ಹಣಿಗೆಯಂತೆ ಪವಿತ್ರವಾಗಿ ತೋರುವರು.

+ + + + +

ಮಡಿವಾಳಪ್ಪನವರು ಸಿದ್ಧನಗವಿಯಲ್ಲಿದ್ದಾಗ್ಗೆ ದಿನಾಲು ರಾತ್ರಿಯಲ್ಲಿ ಎರಡು ಹುಲಿಗಳು ಬಂದು ಸ್ವಾಮಿಗಳ ಸಂಗಡ ಚಿನ್ನಾಟಿಕೆಯನ್ನಾಡುತ್ತ ಬೆಳಗಾಗುವವರೆಗೆ ಅವರ ಸನ್ನಿಧಿಯಲ್ಲಿಯೇ ಇದ್ದು ಬಳಿಕ ಕಾಡಿಗೆ ಹೋಗುತ್ತಿದ್ದವಂತೆ; ಹೀಗಿರಲು, ಒಮ್ಮೆ ಒಬ್ಬ ಶೂದ್ರನು ಒಳ್ಳೇ ನಸುಕಿನಲ್ಲಿ ಸಿದ್ಧನಗವಿಯ ಹತ್ತರ ಹಾದು ಹೋಗುತ್ತಿರುವಾಗ ಅವನು ಒಂದು ಪ್ರಚಂಡವಾದ ಹುಲಿಯನ್ನು ನೋಡಿ ಅಂಜಿ ಅಲ್ಲಿಯೇ ಮೃತಪ್ರಾಯನಾಗಿ ಬಿದ್ದುಬಿಟ್ಟನು; ಸ್ವಾಮಿಗಳವರು ಲಗಬಗೆಯಿಂದ ಓಡಿಹೋಗಿ ಶೈತ್ಯೋಪಚಾರದಿಂದ ಅವನನ್ನು ಎಚ್ಚರಗೊಳಿಸಿ—"ಹುಲಿಗೆ ಇಷ್ಟ್ಯಾಕೆ ಹೆದರಿದೆಯಪ್ಪಾ! ಅದೂ ನಿನ್ನಂತೆ ಒಂದು ಪ್ರಾಣಿಯಲ್ಲವೇ? ಎಂದು ಹೇಳಿ, ಅವನನ್ನು ಸಮಾಧಾನಗೊಳಿಸಿ ಮುಂದಕ್ಕೆ ಕಳಿಸಿಕೊಟ್ಟರು. ಸರ್ವಪ್ರಾಣಿಗಳಲ್ಲಿ ಸಮಬುದ್ಧಿಯು ಹುಟ್ಟಿ ನಿರ್ಭಯರಾಗುವದು ಎಲ್ಲರಿಗೂ ಸಾಧ್ಯವೇ?

†+† +†+ †+† +†+ †+†

ಮಡಿವಾಳಪ್ಪನವರು ಸಂಚಾರಮಾಡುತ್ತ ಒಮ್ಮೆ ಒಂದು ಹಳ್ಳಿಯಲ್ಲಿ ಒಬ್ಬ ಗೌಡನ ಮನೆಯಲ್ಲಿ ಇಳಕೊಂಡರು. ಆ ಗೌಡನು ಒಳ್ಳೇ ಧನಿಕನಾಗಿದ್ದನು. ಆತನಿಗೆ ಸಂತಾನವಿಲ್ಲದ್ದರಿಂದ ಎರಡನೇ ಮದುವೆಯನ್ನಾದರೂ ಮಾಡಿಕೊಂಡು ಸಂತಾನವನ್ನು ಪಡೆಯಬೇಕೆಂದು ಅವನು ಇಚ್ಛಿಸುತ್ತಿದ್ದನು. ಹೆಂಗಸರಿಗೆ ಗಂಡನು ಮತ್ತೊಬ್ಬಾಕೆಯನ್ನು ಮದುವೆ ಮಾಡಿಕೊಳ್ಳುವದು ಸಹನವಾಗದೆಂಬದು ಲೋಕಪ್ರಸಿದ್ಧವಿರುವದಷ್ಟೇ; ಅದರಂತೆ ಆ ಗೌಡನ ಹೆಂಡತಿಯು ಮಕ್ಕಳಿಲ್ಲದ್ದೊಂದೇ ಚಿಂತೆಯಲ್ಲಿರಲು ಗಂಡನು ಮತ್ತೊಂದು ಮದುವೆಮಾಡಿಕೊಳ್ಳುವನೆಂಬ ಹೊಸಚಿಂತೆಯಲ್ಲಿ ಪೂರಾ ಮುಳುಗಿ ಬಿಟ್ಟಿದ್ದಳು. ಹೀಗಿರುವಾಗ ಆಕಸ್ಮಾತ್ತಾಗಿ ಮಡಿವಾಳಸ್ವಾಮಿಗಳು ಮೇಲೆ ಹೇಳಿದಂತೆ ಅವರ ಮನೆಗೆ ಬರಲು, ಆ ಹೆಣ್ಣುಮಗಳು ಸಮಾಧಾನಪಟ್ಟು—ಪುತ್ರಾರ್ಥಿನಿಯಾಗಿ ಏಕಾಂತದಲ್ಲಿ ಮಡಿವಾಳಪ್ಪನವರಿಗೆ ಭೆಟ್ಟಿಯಾದಳು—ಆಗ ಮಡಿವಾಳಸ್ವಾಮಿಗಳು ಆ ಹೆಣ್ಣು

ಮಗಳ ಇಚ್ಛೆಯನ್ನು ಜ್ಞಾನದೃಷ್ಟಿಯಿಂದ ತಿಳಿದು ಆಕೆಗೆ ಒಂದು ತಾಬಂಡಿ ಯನ್ನು ತರಹೇಳಿದರು. ಅದರಂತೆ ಅವಳು ತಂದು ಮುಂದಿಡಲು ಸ್ವಾಮಿಗಳ ವರು ಅದರಲ್ಲಿ ತಮ್ಮ ದಿವ್ಯವಾದ ರೇತಸ್ಸನ್ನು ಬಿಟ್ಟು ಅರಿವೆಯ ಒಂದು ತುಣು ಕನ್ನು ಆ ರೇತಸ್ಸಿನಲ್ಲಿ ಚಲ್ಲಿದರು. ಕೂಡಲೇ ಆ ಅರಿವೆಯು ಸುಟ್ಟು ಹೋಯಿ-ತು. ಆಗ ಮಡಿವಾಳಪ್ಪನವರು ಆ ಹೆಣ್ಣುಮಗಳ ಕಡೆಗೆ ನೋರೆ ಮಾಡಿ— ತಾಯೀ, ನೋಡು, ಇಂಥ ಉರಿಯನ್ನು ನಿನ್ನ ಉದರದಲ್ಲಿಟ್ಟುಕೊಳ್ಳಲು ನೀನು ಸಮರ್ಥಳಾಗಬಹುದೇ? ಎಂದು ನುಡಿದರು. ಆಕೆಯು ದಂಗು ಬಡಿದು ಸ್ವಾಮಿ ತಪ್ಪಾಯಿತು. ಎಂದು ನುಡಿದು ಅತ್ಯಂತ ಲಜ್ಜೆಯಿಂದ ಸಾಷ್ಟಾಂಗವಾಗಿ ನಮ ಸ್ಕಾರಮಾಡಿದಳು. ಸ್ವಾಮಿಗಳು ಆಕೆಯನ್ನು ಎಬ್ಬಿಸಿ ನಾಲ್ಕು ಸದುಪದೇಶಗ ಳನ್ನು ಹೂಡಿ, ನಿನಗೆ ಸಂತತಿಯಾಗುವದು ಚಿಂತೆಮಾಡಬೇಡ ಪಾತಿವ್ರತ್ಯದಿಂದ ನಡೆ; ಎಂದು ಹೇಳಿ ಆಕೆಯನ್ನು ಕಳಿಸಿಕೊಟ್ಟರು. ಮುಂದೆ ಆ ಹೆಣ್ಣುಮಗ ಳಿಗೆ ಪುತ್ರಸಂತಾನವಾಯಿತು, ಆಕೆಯು ಮಡಿವಾಳಸ್ವಾಮಿಯವರನ್ನು ಸ್ಮರಿ ಸುತ್ತ ಸುಖದಿಂದ ಕಾಲಹರಣಮಾಡಿದಳು. ಮಡಿವಾಳಪ್ಪನವರ ಅನುಗ್ರಹದಿಂದ ಹುಟ್ಟಿದ ಆ ಮಗುವಿನಿಂದ ಆ ಗೌಡನ ಕುಲಕೋಟಿಯು ಉದ್ಧೃತವಾಯಿತು! ದೊಡ್ಡವರ ಕೃಪಾದೃಷ್ಟಿಯಿಂದ ದೊರೆಯದ ಫಲವಾವುದು?

---

ಹನ್ನೊಂದನೆಯ ಪ್ರಕರಣ.

## ಗರಗದಲ್ಲಿಯ ಮಠಸ್ಥಾಪನೆ.




ಚ್ಚಣಿಕಿಯೆಂಬ ಗ್ರಾಮದವರು ತಮ್ಮ ಊರಲ್ಲಿ ಒಂದು ಮಠ ಕಟ್ಟಿಸಿ ಮಡಿವಾಳಪ್ಪನವರನ್ನು ಕರಕೊಂಡು ಹೋಗಿ ಕೆಲವು ದಿವಸ ಅಲ್ಲಿ ಇಟ್ಟುಕೊಂಡರು, ಆ ಬಳಿಕ ನೇಗಿನ ಹಾಳದ ದೇಸಾಯರು ಸ್ವಾಮಿಗಳನ್ನು ಕರಕೊಂಡು ಹೋಗಿ ತಮ್ಮಲ್ಲಿ ಒಂದು ಮಠಕಟ್ಟಿಸಿಕೊಟ್ಟರು. ಆ ವೂರಲ್ಲಿ ಒಮ್ಮೆ ಕುಬಸದ ನಾಗಪ್ಪನ ಹೆಂಡತಿಯು ಹಡೆಯುವಾಗ ಕೂಸು ಅಡ್ಡಸಿಕ್ಕು ಮೂರು ದಿವಸಗಳಿಂದ ಬಹು ಕಷ್ಟಪಡುತ್ತಿದ್ದಳು. ಮಡಿವಾಳಪ್ಪನವರು ತಮ್ಮ ಪಾದೋ ದಕದಿಂದ ಆಕೆಯ ಕಷ್ಟವನ್ನು ದೂರ ಮಾಡಿದರು. ಆ ಮನೆಯವರು ಕೃತಜ್ಞ

ತೆಯಿಂದ ಆ ಕೂಸಿಗೆ ಮಡಿವಾಳಪ್ಪನ ಹೆಸರನ್ನು ಇಟ್ಟರು.

ಬಳಿಕ ಕೆಲವು ದಿವಸಗಳ ಮೇಲೆ ಗರಗದಿಂದ ನರಿಸಿದ್ಧಲಿಂಗಪ್ಪ, ಹಣಗಿ ಗಂಟೆಪ್ಪ, ಎಲಿಗಾರ ಭೀಮಪ್ಪ ಮೊದಲಾದವರು ಬಂದು ಸ್ವಾಮಿಗಳಿಗೆ ನಮಸ್ಕಾರ ಮಾಡಿ ಕುಳಿತರು. ಮಡಿವಾಳಪ್ಪನವರು ಅವರನ್ನು ಕುರಿತು ಯಾಕೆ ಬಂದಿರೆಂದು ಕೇಳಿದರು. ಅಪ್ಪಾ, ನಮ್ಮ ಊರಿಗೆ ದಯಮಾಡಿಸಬೇಕು, ಅಪ್ಪನನ್ನು ಕರೆದುಕೊಂಡು ಹೋಗಬೇಕೆಂದು ಬಂದಿರುವೆವು. ಎಂದು ಹೇಳಲು ಹಾಗಾದರೆ ಬಹಳ ನೆಟ್ಟಗಾಯಿತು. ನಿಮ್ಮ ಊರಲ್ಲಿ ಹಳ್ಳದ ದಂಡೆಯ ಮೇಲೆ ಬಸಪ್ಪನ ಗುಡಿಯ ಹತ್ತರ ಒಂದು ಮಠವನ್ನು ಕಟ್ಟಿಸಿರಿ; ನಾನಾದರೂ ನಿಮ್ಮ ಊರಲ್ಲಿಯೇ ಇರಬೇಕೆಂದು ಮಾಡಿರುವೆನು; ಎಂದು ಹೇಳಿ, ಸ್ವಾಮಿಗಳವರು ಪ್ರಸಾದವನ್ನು ಕೊಟ್ಟು ಅವರನ್ನು ಕಳಿಸಿದರು. ಅದರಂತೆ ಗರಗದ ಭಕ್ತರು ಮಠವನ್ನು ತಯಾರಿಸಿ, ಪರಮೋತ್ಸಾಹದಿಂದ ಮಡಿವಾಳಪ್ಪನವರನ್ನು ಕರತಂದರು. ಸ್ವಾಮಿಗಳವರು ಆ ಮಠವನ್ನು ನೋಡಿ, ಸಂತೋಷಪಟ್ಟು ಅದರಲ್ಲಿ ವಾಸಮಾಡಿದರು. ಆ ಮಠದ ಬಳಿಯಲ್ಲಿ ಹಳ್ಳವು ಹರಿಯುತ್ತಿದ್ದದರಿಂದ ಅದಕ್ಕೆ ಒಂದು ಚಿಕ್ಕ ಘಾಟನ್ನು ಕಟ್ಟಿಸಿ ಬರಹೋಗುವ ಜನರ ಸ್ನಾನ-ಪಾನಾದಿಗಳಿಗೆ ಅನುಕೂಲತೆಯನ್ನು ಮಾಡಿಕೊಟ್ಟರು. ಸ್ವಾಮಿಗಳವರು ದಿನಾಲು ಆ ಹಳ್ಳದಲ್ಲಿ ಸ್ನಾನಮಾಡ ಹತ್ತಿದರು. "ಕಾಶಿಯಲ್ಲಿ ಗಂಗಾನದಿಯ ಘಾಟಿನ ಮೇಲೆ ಸ್ನಾನ ಮಾಡುವಾಗ ಆಗುತ್ತಿದ್ದಷ್ಟು ಆನಂದವು, ಈ ಹಳ್ಳದ ಈ ಚಿಕ್ಕ ಘಾಟಿನ ಮೇಲೆ ಕುಳಿತು ಸ್ನಾನ ಮಾಡುವಾಗ ನನಗೆ ಆಗುತ್ತದೆ"ಂದು ಮಡಿವಾಳಪ್ಪನವರು ಅನ್ನುತ್ತಿದ್ದರಂತೆ!—ದೊಡ್ಡವರಿಗೆ ಜಗತ್ತೇ ತೀರ್ಥವಲ್ಲವೇ?

ಗರಗದಲ್ಲಿದ್ದಾಗ ಮಡಿವಾಳಪ್ಪನವರ ಶಿಷ್ಯಸಂಪತ್ತು ಹೆಚ್ಚಿತು. ದೂರದೂರದಿಂದ ಜನರು ಬಂದು ತಮ್ಮ ಅಭೀಷ್ಟಗಳನ್ನು ಪೂರ್ಣ ಮಾಡಿಕೊಂಡು ಹೋಗಹತ್ತಿದರು. ರೋಗಪೀಡಿತರೂ, ಪುತ್ರಾರ್ಥಿಗಳೂ ಹಿಂಡುಗಟ್ಟಿ ಬರತೊಡಗಿದರು. ಐಹಿಕಸುಖ ಮಗ್ನರಾದ ನಾವು ಸತ್ಪುರುಷರಿಂದ ಐಹಿಕಸುಖಸಾಧನಗಳನ್ನೇ ಹೆಚ್ಚಿಸಿಕೊಳ್ಳುವದರಲ್ಲಿ ಕಾಲಹರಣಮಾಡಿ, ಸತ್ಪುರುಷರಿಂದಾಗುವ ನಿಜವಾದ ಲಾಭಕ್ಕೆ ಎರವಾಗುತ್ತೇವೆ. ಮಡಿವಾಳಪ್ಪನವರಿಗೆ ಜನರ ಉಪದ್ರುವ ಬಹಳವಾಗತೊಡಗಿತು. ಒಮ್ಮೆ ನೇಗಿನಹಾಳದಿಂದ ಪಡೆಪ್ಪ, ಅಬ್ಬಣ್ಣಪ್ಪ ಎಂಬುವರು ಬಂದು ಸ್ವಾಮಿಗಳಿಗೆ ಸಾಷ್ಟಾಂಗನಮಸ್ಕಾರ ಮಾಡಿ ಕುಳಿತರು. ಸ್ವಾಮಿ

ಗಳು ಅವರನ್ನು ನೋಡಿ—ಅಜ್ಜಪ್ಪಾ ಯಾಕೆ ಬಂದೆ; ಎಂದು ಕೇಳಿದರು. ಅಜ್ಜಪ್ಪನು ಮಾತಾಡದೆ ಸುಮ್ಮನಿರಲು, "ನಿಮ್ಮೂರ ದೇಸಾಯಿ ರುಮ್ಯಾನಿಗೆ ಪುರುಷತ್ವವಿಲ್ಲೆಂದು ಕೇಳಾಕ ಬಂದಿ ಹೌದೆ?" ಎಂದು ತಾವೇ ಕೇಳಿದರು. ಅದಕ್ಕೆ ಅಜ್ಜಪ್ಪನು ಆಶ್ಚರ್ಯಪಟ್ಟು ಅಪ್ಪಗೆ ಗೊತ್ತಿಲ್ಲದ್ದು ಯಾವದು ಎಂದು ನುಡಿದನು.

ಬಳಿಕ ಮಡಿವಾಳಪ್ಪನವರು ಅಜ್ಜಪ್ಪನಿಗೆ 'ರೂಮ್ಯಾನನ್ನೂ ಅವನ ಹೆಂಡತಿಯನ್ನೂ ಕರಕೊಂಡು ಬಾ' ಎಂದು ಹೇಳಿದರು. ಅಜ್ಜಪ್ಪನು ನೇಗಿನಹಾಳಕ್ಕೆ ಹೋಗಿ ಅವರಿಬ್ಬರನ್ನು ಕರಕೊಂಡು ಬಂದು ಸ್ವಾಮಿಗಳ ಮುಂದೆ ನಿಲ್ಲಿಸಿದನು. ಆಗ ಸ್ವಾಮಿಗಳು ಅವರಿಗೆ ವಿಭೂತಿ ಕೊಟ್ಟು, ಊಟ ಮಾಡಿಸಿ ಆ ದಿನ ರಾತ್ರಿ ಅವರನ್ನು ತಮ್ಮ ಕುದುರೇ ಕಟ್ಟುವ ಕೋಣೆಯಲ್ಲಿ ಮಲಗಿಸಿದರು. ಮರುದಿನ ಬೆಳಗಾದ ಮೇಲೆ ಸ್ವಾಮಿಗಳು ಅವರನ್ನು ಕರೆಯಿಸಿ ರುಮ್ಮಪ್ಪನ ಹೆಂಡತಿಯನ್ನು ಕುರಿತು—ಬಂದವ್ವಾ, ನಿನ್ನ ಗಂಡನ ಪ್ರಕೃತಿ ಹ್ಯಾಗೆ ಅದೆ, ಹೇಳು ಅಂದರು. ಅಗ ಆಕೆಯು ಸಂತೋಷದಿಂದ ಸ್ವಲ್ಪ ನಾಚುತ್ತ ಅಪ್ಪಾ ಬಹಳ ನೆಟ್ಟಗದೆ ಎಂದು ನುಡಿದಳು. ಸ್ವಾಮಿಗಳು ಆ ದಂಪತಿಗಳಿಗೆ ಆಶೀರ್ವಾದವ ಮಾಡಿ ಅವರನ್ನು ಊರಿಗೆ ಕಳಿಸಿಕೊಟ್ಟರು.

ಹೀಗೆ ಮಡಿವಾಳಪ್ಪನವರು ಬಹುಜನ ಸಂಸಾರಿಕರಿಗೆ ಕಲ್ಯಾಣ ಮಾಡುತ್ತ ಗರಗದ ನಿವಾಸಿಗಳಿಗೆ ಸದುಪದೇಶ ಮಾಡುತ್ತ ಇರುತ್ತಿರಲು, ಒಬ್ಬ ಪಾದ್ರಿಯು ಆ ಊರಿಗೆ ಬಂದನು. ಅವನು ಗರಗದ ಜನರು ಭಜನೆಮಾಡುವದನ್ನು ನೋಡಿ ಅವರಿಗೆ ಕ್ರಿಸ್ತೀಧರ್ಮವನ್ನು ಬೋಧಿಸ ಹೋದನು. ಆಗ ಆ ಜನರು ಆ ಪಾದ್ರಿಯನ್ನು ಮಡಿವಾಳಪ್ಪನವರ ಕಡೆಗೆ ಕರಕೊಂಡು ಹೋದರು. ಮಡಿವಾಳಪ್ಪನವರು ಆ ಪಾದ್ರಿಗೆ ನೀನು ಯಾರು ಇಲ್ಲಿಗೆ ಯಾಕೆ ಬಂದೀದಿ? ಎಂದು ಕೇಳಿದರು. ಅದಕ್ಕೆ ಅವನು—ನಾನು ಪಾದ್ರಿಯು; ನಮ್ಮ ದೇವರು ದೊಡ್ಡವನು, ಅವನೇ ಎಲ್ಲ ಲೋಕಗಳನ್ನು ಸಂರಕ್ಷಿಸುತ್ತಾನೆ. ನಮ್ಮ ದೇವರಿಗಿಂತ ಇನ್ನಾವ ದೇವರೂ ದೊಡ್ಡವಲ್ಲ; ಹೀಗೆ ಬೋಧಮಾಡಿ ಜನರನ್ನು ಉದ್ಧರಿಸಲಿಕ್ಕೆ ನಮ್ಮ ದೇವರಾದ ಏಸುಕ್ರಿಸ್ತನ ಆಜ್ಞೆಯಾಗಿರುತ್ತದೆ. ನನ್ನ ಮಾತು ಕೇಳಿದವರನ್ನು ನಮ್ಮ ದೇವರು ಪರಲೋಕಕ್ಕೆ ಕರಕೊಂಡು ಹೋಗಿ ತನ್ನ ಹತ್ತರ ಇಟ್ಟುಕೊಳ್ಳುತ್ತಾನೆ; ಎಂದು ಹೇಳಿದನು. ಪಾದ್ರಿಯು ಮಾತು ಮುಗಿದ ಮೇಲೆ ಮಡಿವಾಳಪ್ಪನವರು ನುಡಿದರೇನಂದರೆ—"ಹೌದಪ್ಪಾ ಪಾದ್ರೀ

ಸಾಹೇಬರೇ, ನಿಮ್ಮ ದೇವರು ದೊಡ್ಡದಾದರೂ ನಮ್ಮ ದೇವರ ಮಲವನ್ನು ತಿನ್ನುತ್ತದಲ್ಲ? ಇದಕ್ಕೆ ಹ್ಯಾಗೆ? ಪಾದ್ರಿಯು ಖಿನ್ನನಾಗಿ ನಿಮ್ಮ ದೇವರು ಯಾವದು? ಎಂದು ಕೇಳಿದನು. ಅದಕ್ಕೆ ಮಡಿವಾಳಪ್ಪನವರು ನಮ್ಮ ದೇವರೆಂದರೆ ಒರಳುಕಲ್ಲು, ಬೀಸುವ ಕಲ್ಲು ಎಂದು ಹೇಳಿದರು. ಇದನ್ನು ಕೇಳಿ ಪಾದ್ರಿಯು ನಿರುತ್ತರನಾಗಿ ಹೊರಟು ಹೋದನು.

ಈ ಸುಮಾರಕ್ಕೆ ಮಡಿವಾಳಪ್ಪನವರಿಗೆ ಅಪರವಯಸ್ಸು ಪ್ರಾಪ್ತವಾಗಿತ್ತು ಆದ್ದರಿಂದ ಅವರು ಗರಗವನ್ನು ಬಿಟ್ಟು ಎಲ್ಲಿಯೂ ಹೊರಡದಾದರು; ಮಠಕ್ಕೆ ಬಂದ ಭಕ್ತಮಂಡಲಿಗೆ ಜ್ಞಾನೋಪದೇಶ ಮಾಡುತ್ತ, ಪ್ರಸಂಗವಶಾತ್ ಭಕ್ತರಕ್ಷಣೆಗಾಗಿ ಹಲವು ಅಮಾನುಷ ಕೃತ್ಯಗಳನ್ನು ತೋರಿಸುತ್ತ ಗರಗದ ಮಠದಲ್ಲಿಯೇ ವಾಸಮಾಡಿದರು. ಗರಗಗ್ರಾಮವು ಅವರಿಗೆ ಕೇವಲ ಪ್ರೀತಿಯ ನಿವಾಸಸ್ಥಾನವಾಯಿತು. ಇಡೀ ಭರತಭೂಮಂಡಲವನ್ನೆಲ್ಲ ಸಂಚರಿಸಿದ ನಮ್ಮ ಮಡಿವಾಳಪ್ಪನವರಿಗೆ ಗರಗದಂಥ ಸಣ್ಣ ಹಳ್ಳಿಯು ಪ್ರಶಸ್ತವಾಗಿ ತೋರಬೇಕೆಂದರೆ ಅಲ್ಲಿಯ ಭಕ್ತಮಂಡಲಿಯ ಭಕ್ತಿಯೇ ಕಾರಣವೆಂದು ಬಿಚ್ಚಿ ಬರೆಯುವ ಕಾರಣವಿಲ್ಲ.

---

ಹನ್ನೆರಡನೆಯ ಪ್ರಕರಣ.

## ಭಕ್ತ ಸಂರಕ್ಷಣ.

—(-o-)—




ದಿನ ಪ್ರಕರಣದಲ್ಲಿ ಮಡಿವಾಳಪ್ಪನವರಿಗೆ ಗರಗ ಗ್ರಾಮವು ಪ್ರೀತಿಯ ಸ್ಥಾನವಾಗಿತ್ತೆಂದು ಹೇಳಿರುವದಷ್ಟೇ; ಅಲ್ಲಿ ಆ ಮಹಾತ್ಮರು ಹಲವು ಜನ ಭಕ್ತರನ್ನುದ್ಧರಿಸಿದರು. ಸಚ್ಛಿಷ್ಯರು ಹೆಚ್ಚಿದರು. ಸದ್ಗುರುವೆಂಬ ನಾಮಾಭಿಧಾನವು ಅವರಿಗೆ ಪರಿಶೋಭಿಸಿತು. ತೋಟದ ಸಿದ್ಧಲಿಂಗ ಸ್ವಾಮಿಗಳೇ ಮೊದಲಾದವರು ಅವರ ಸೇವೆಯನ್ನು ಮನಮುಟ್ಟಿ ಮಾಡತೊಡಗಿದರು. ಅವರ ಭವ್ಯವಾದ ಮೂರ್ತಿಯನ್ನೂ ಪ್ರಸನ್ನವಾದ ಮುಖಮುದ್ರೆಯನ್ನೂ ಕಂಡು ಭಕ್ತರಿಗೆ ಪರಮಾನಂದವಾಗುತ್ತಿತ್ತು. ಕಾಲಲ್ಲಿ ಆವುಗೆಗಳನ್ನು ಮೆಟ್ಟಿ ಕೈಯಲ್ಲಿ ಉದ್ದನ್ನ ಕೋಲು ಹಿಡಿದು, ಸರ್ವಾಂಗದಲ್ಲೂ ಶುಭ್ರ·ಭಸ್ಮಲೇಪನದಿಂದ

ಸಮನೋಹರವಾಗಿ ಕಾಣುವ ಆ ಮಹಾತ್ಮರ ಧ್ಯಾನಮೂರ್ತಿಯು ಸದ್ಭಕ್ತರ ಹೃದಯದಲ್ಲಿ ಸ್ಥಿರವಾಗಿ ವಾಸಮಾಡುತ್ತಿತ್ತು. ದೂರ ದೂರಿನ ಭಕ್ತವೃಂದವು ಆ ಮಹಾತ್ಮರ ದರ್ಶನಕ್ಕೆಂದು ಬಂದು ಕಾಮನಾ ಪರಿಪೂರ್ಣರಾಗಿ ಹೋಗುತ್ತಿದ್ದರು. ಹೀಗಿರಲು ಒಮ್ಮೆ ರುದ್ರಪ್ಪನೆಂಬೋರ್ವ ಗೃಹಸ್ಥನು ಕುಟುಂಬಸಮೇತನಾಗಿ ಸ್ವಾಮಿಗಳವರ ದರ್ಶನಕ್ಕೆ ಬಂದನು, ಅವನಲ್ಲಿದ್ದ ನಿಷ್ಠೆಯನ್ನು ನೋಡಿ ಸ್ವಾಮಿಗಳಿಗೆ ಪರಮಾನಂದವಾಯಿತು. ರುದ್ರಪ್ಪನು ಸ್ವಾಮಿಗಳನ್ನು ಭಕ್ತಿಯಿಂದ ಸೇವಿಸುತ್ತ ಇರುತ್ತಿರಲು ಒಂದು ದಿನ ಸಂಜೆಯ ಮುಂಚೆ ಸುಮಾರು ಎರಡು ತಾಸು ಹೊತ್ತು ಇರುವಾಗ ಮಡಿವಾಳಪ್ಪನವರು ರುದ್ರಪ್ಪನನ್ನು ಕರೆದು—ತಮ್ಮಾ ರುದ್ರಾ, ನೀನು ಮಕ್ಕಳೊಂದಿಗನು ಹೀಗೆಯೇ ನೀನು ನಮ್ಮಲ್ಲಿ ಕುಳಿತುಬಿಟ್ಟರೆ ನಿನ್ನ ಪ್ರಪಂಚವು ಘಾತವಾದೀತು. ನೀನು ಈಗಿಂದೀಗಲೇ ನಿಮ್ಮ ಊರಿಗೆ ಹೊರಟು ಹೋಗಬೇಕು, ಎಂದು ನುಡಿದರು. ರುದ್ರಪ್ಪನು ಸ್ವಾಮಿಗಳನ್ನು ಬಿಟ್ಟು ಹೋಗಲಾರದೆ ತೊಳಲಾಡಿ—ಅಪ್ಪಾ, ಹೊತ್ತು ಹೋಗಿದೆ ಈಗ ಹ್ಯಾಗೆ ಹೋಗಲಿ? ನಾಳೆ ಮುಂಜಾನೆ ಇಲ್ಲಿಂದ ಹೊರಡುವೆನು, ಎಂದು ವಿನಯದಿಂದ ಬೇಡಿಕೊಂಡನು. ರುದ್ರಪ್ಪನ ಈ ಮಾತುಗಳನ್ನು ಕೇಳಿ ಮಡಿವಾಳಪ್ಪನವರು—ಛೀ ಹುಚ್ಚಾ, ಈ ದಿನ ನೀನು ಇಲ್ಲಿ ಇರಕೂಡದು. ಹಾದಿಯಲ್ಲಿ ಎಲ್ಲಾದರೂ ಬೀಗರು ಬಿಜ್ಜರ ಮನೆಯಲ್ಲಿ ವಸ್ತೀಮಾಡೀ? ಹಾಗೇನೂ ಮಾಡದೆ ನೆಟ್ಟಗೆ ಹೆಂಡರು ಮಕ್ಕಳೊಡನೆ ಊರಿಗೆ ಹೋಗು; ರಾತ್ರಿಯಾದರೂ ಚಿಂತೆಯಿಲ್ಲ, ಸ್ವಾಮಿಯು ನಿನ್ನನ್ನು ಕಾಯುವನು ಎಂದು ಖಂಡಿತವಾಗಿ ಹೇಳಿದರು.

ಬಳಿಕ ರುದ್ರಪ್ಪನು ನಿರುಪಾಯನಾಗಿ ಸ್ವಾಮಿಗಳ ಅಪ್ಪಣೆ ತಕ್ಕೊಂಡು ಪರಿವಾರದೊಡನೆ ಊರ ಹಾದೀ ಹಿಡಿದನು. ಗರಗಗ್ರಾಮಕ್ಕೂ ರುದ್ರಪ್ಪನ ಊರಾದ ಗುರ್ಲಹೊಸೂರಿಗೂ ಬಹಳ ದೂರ ಇದ್ದದರಿಂದ ಅವನು ಆರು ತಾಸು ರಾತ್ರಿಯ ಸುಮಾರಕ್ಕೆ ತನ್ನ ಮನೆಯನ್ನು ಮುಟ್ಟಿದನು. ಆ ದಿವಸ ರುದ್ರಪ್ಪನ ಮನೆಗೆ ಕಳ್ಳರು ಬಂದಿದ್ದರು. ಅವರು ಕನ್ನದ ಮಾರ್ಗವಾಗಿ ಒಳಗೆ ಪ್ರವೇಶ ಮಾಡಿದ್ದರು. ಇನ್ನು ಅವರು ಮನೆಯೊಳಗಿನ ಜಿಂದಿಗಿಯನ್ನೆಲ್ಲ ದಾಟಿಸತಕ್ಕವರು; ಅಷ್ಟರಲ್ಲಿಯೇ ಮೇಲೆ ಹೇಳಿದಂತೆ ರುದ್ರಪ್ಪನು ಮನೆಗೆ ಬಂದು ಬಾಗಿಲ ತೆರೆದು ಒಳಹೊಕ್ಕನು. ಕಳ್ಳರು ಅಂಜಿ ಮನೆಬಿಟ್ಟು ಓಡಿಹೋದರು. ಬಳಿಕ ರುದ್ರಪ್ಪನು ದೀಪಹಚ್ಚಲು ನಡೆದ ಪ್ರಕಾರವು ಅವನಿಗೆ ಹೊಳೆಯಿತು. ಕಳ್ಳರು ಸಾಮಾನುಗಳನ್ನೆಲ್ಲ ಬೈಲಿಗೆಳೆದದ್ದನ್ನೂ ಹಿತ್ತಲದ ಗೋಡೆಗೆ ಕನ್ನ ಬಿದ್ದದ್ದನ್ನೂ

ನೋಡಿ—ಓಹೋ! ಮುಡಿವಾಳ ಗುರುವೇ ಈ ದಿವಸ ನಮ್ಮನ್ನು ಸಂರಕ್ಷಣೆ ಮಾಡಿದನು. ಆ ಮಹಾರಾಯನು ಈ ದಿನ ನನ್ನನ್ನು ಕಳುಹಿಸದಿದ್ದರೆ ನಮ್ಮ ಬದುಕೆಲ್ಲ ಕಳ್ಳರ ಪಾಲಾಗಿ ಬಡವನಾದ ನಾನು ಹಾಳಾಗಿ ಹೋಗುತ್ತಿದ್ದೆನು. ಹೆಂಡರ ಮಕ್ಕಳ ಕೈಯಲ್ಲಿ ಪರಟಿಯು ಬರುತ್ತಿತ್ತು. ಮುಡಿವಾಳಗುರುವೇ ನೀನೇ ಸಂರಕ್ಷಣೆಮಾಡಿದೆ. ನಿನ್ನ ಮಹಿಮೆ ತಿಳಿಯದು, ಎಂದು ಆ ಮಹಾತ್ಮನನ್ನು ಕೊಂಡಾಡಿದನು. ಈ ಸಂಗತಿಯಿಂದಂತೂ ರುದ್ರಪ್ಪನ ಭಕ್ತಿಯು ವೃದ್ಧಿಂಗತವಾಯಿತು. ನಂತರ ರುದ್ರಪ್ಪನು ಮನೆಯ ಕನ್ನವನ್ನು ಮುಚ್ಚಿ ಮುಡಿವಾಳಗುರುವಿನ ದರ್ಶನಕ್ಕೆ ಬಂದು ಎಲ್ಲ ಸಂಗತಿಯನ್ನು ಹೇಳಿದನು. ಗದಗದ ನಿವಾಸಿಗಳಿಗೆಲ್ಲ ಪರಮಾಶ್ಚರ್ಯವಾಗಿ ಅವರು ಮುಡಿವಾಳಪ್ಪನವರನ್ನು ಸ್ತವನಮಾಡಿದರು. ಒಂದು ದಿನ ಮುಡಿವಾಳಪ್ಪನವರು ತಮ್ಮ ಶಿಷ್ಯರನ್ನು ಕುರಿತು—"ದಿನಾಲು ಬರುವ ಕಜ್ಜಾಯದ ಭಿಕ್ಷೆಯ ರೊಟ್ಟಿಗಳಲ್ಲಿ ಏನಾದರೂ ಸಿಲಕು ಉಳಿಯುವವೋ? ಎಂದು ಕೇಳಿದರು. ಶಿಷ್ಯರು ಉಳಿಯುತ್ತವೆಂದು ಹೇಳಿದರು. ಅದಕ್ಕೆ ಮುಡಿವಾಳಪ್ಪನವರು—ಹಾಗಾದರೆ ರೊಟ್ಟಿಗಳನ್ನು ಕೆಡಿಸ ಬೇಡಿರಿ. ಉಳಿದಷ್ಟು ರೊಟ್ಟಿಗಳನ್ನು ಒಣಗಿಸಿ ಗಳಿಗೆಗಳನ್ನು ತುಂಬಿ ಇಡಿರಿ. ನಾನು ನೆನಿಸಿಕೊಂಡು ತಿನ್ನುತ್ತೇನೆ ಎಂದು ಹೇಳಿದರು. ಅದರಂತೆ ಶಿಷ್ಯರು ಮಾಡತೊಡಗಿದರು. ಮುಂದೆ ಕೆಲವು ದಿವಸಗಳ ಮೇಲೆ ಹೊಡ್ಡ ದುಷ್ಕಾಲವು ಪ್ರಾಪ್ತವಾಯಿತು. ಜನರು ಅನ್ನನ್ನಗತಿಕರಾಗಿ ಹಾದಿ ಹಾದಿಗೆ ಪ್ರಾಣಬಿಡಹತ್ತಿದರು. ಇಂಥ ಸ್ಥಿತಿಯಲ್ಲಿ ಸ್ವಾಮಿಗಳ ಮಠದಲ್ಲಿದ್ದ ಒಣರೊಟ್ಟಿಗಳ ಗಳಿಗೆಗಳು ಬಹಳ ಉಪಯೋಗವಾದವು. ಅನ್ನಾರ್ಥಿಯಾಗಿ ಬಂದವರಿಗೆ ಸ್ವಾಮಿಗಳ ಮಠದಲ್ಲಿ ಹೊಟ್ಟೆತುಂಬಾ ರೊಟ್ಟಿಯು ದೊರಕುತ್ತಿತ್ತು. ಮುಡಿವಾಳಪ್ಪನವರ ಕೃಪಾದೃಷ್ಟಿಯಿಂದ ಆ ಗಳಿಗೆಗಳೊಳಗಿನ ರೊಟ್ಟಿಗಳು ಅಕ್ಷಯ್ಯವಾಗುತ್ತ ನಡೆದವು. ಎಷ್ಟೋಜನ ಬಡವರ ಪ್ರಾಣಸಂರಕ್ಷಣವಾಯಿತು. ಇಂಥ ಲೀಲೆಗಳಿಂದ ಮುಡಿವಾಳಪ್ಪನವರಲ್ಲಿ ಲೋಕಾನುರಾಗವು ಹೆಚ್ಚತೊಡಗಿತು.

ಮುಡಿವಾಳಪ್ಪನವರಿಗೆ ಹೊದ್ದುಕೊಳ್ಳಲಿಕ್ಕೆ ಬಹಳ ಕಂಬಳಿಗಳು ಬೇಕಾಗುತ್ತಿದ್ದವು. ಒಂದು ದಿನ ತೋಟದ ಸಿದ್ಧಲಿಂಗಸ್ವಾಮಿಯು, ಅವರ ಹಾಸಿಗೆಯನ್ನು ಜಾಡಿಸಿ ಹಾಸಿ, ಹೊದ್ದುಕೊಳ್ಳುವ ಕಂಬಳಿಗಳನ್ನು ಜೋಡಿಸಿ ಇಡುವಾಗ ಅವುಗಳಲ್ಲಿಯ ಒಂದು ಹಳೇ ಕಂಬಳಿಯ ಮೇಲೆ ಅವನ ಆಶೆಯು ಕೂತಿತು. ಆದರೆ ಮುಡಿವಾಳಸ್ವಾಮಿಯವರನ್ನು ಬಾಯಿಬಿಚ್ಚಿ ಕೇಳುವದಾಗಲಿಲ್ಲ ಹೀಗೆ

ಒಂದೆರಡು ದಿನಗಳು ಕಳೆದವು. ಸರ್ವಾಂತರ್ಯಾಮಿಗಳಾದ ಮುಡಿವಾಳಪ್ಪನವರಿಗೆ ಸಿದ್ಧಲಿಂಗಸ್ವಾಮಿಯ ಈ ಅಪೇಕ್ಷೆಯು ತಿಳಿಯದೆ ಇದ್ದೀತೇ; ಆ ಕೂಡಲೆ ಅವರು ಸಿದ್ಧಲಿಂಗಾ, ಬಾ ಎಂದು ಕರೆದು—ನೀನು ಇಂಥದೊಂದು ಊರಿಗೆ ಹೋಗಿ ಬಾ ಎಂದು ಹೇಳಿದರು; ಸಿದ್ಧಲಿಂಗಸ್ವಾಮಿಯು ಊರಿಗೆ ಹೋಗಿ ಮುಡಿವಾಳಪ್ಪನವರು ಹೇಳಿದ ಕೆಲಸವನ್ನು ಮಾಡಿಕೊಂಡು ಬಂದು ನಮಸ್ಕಾರ ಮಾಡಿ ಕುಳಿತನು. ಆಗ ಆ ಮಹಾತ್ಮರು—ಸಿದ್ಧಲಿಂಗಾ, ಹೇಳಿದ ಕೆಲಸವನ್ನು ಚನ್ನಾಗಿ ಮಾಡಿಕೊಂಡು ಬಂದೆಯಾದ್ದರಿಂದ ನಿನಗೆ ಈ ಕಂಬಳಿಯನ್ನು ಇನಾಮಾಗಿ ಕೊಡುತ್ತೇವೆಂದು ನುಡಿದು, ಸಿದ್ಧಲಿಂಗಸ್ವಾಮಿಯು ಬಯಸಿದ ಕಂಬಳಿಯನ್ನೇ ಅವನಿಗೆ ಕೊಟ್ಟರು. ಆಗ ಸಿದ್ಧಲಿಂಗಸ್ವಾಮಿಯು ಮೆಟ್ಟಿಬಿದ್ದು ಓಹೋ ಸ್ವಾಮಿಯವರು ನನ್ನ ಹೃದ್ಗತವನ್ನು ತಿಳಿದು ಈ ಕಂಬಳಿಯನ್ನು ನನಗೆ ಕೊಟ್ಟರು. ಸ್ವಾಮಿಯವರಿಗೆ ತಿಳಿಯದ್ದು ಒಂದೂ ಇಲ್ಲವೆಂದು ಅಂದುಕೊಂಡು ಅವರೊಡನೆ ಪರಮಭಕ್ತಿ ವಿಶ್ವಾಸಗಳಿಂದ ನಡಕೊಳ್ಳ ಹತ್ತಿದನು.

ಕುರ್ಲಿಂಗಪ್ಪನೆಂಬವನೊಬ್ಬನು ಮುಡಿವಾಳಸ್ವಾಮಿಯವರ ಭಕ್ತನಿದ್ದನು. ಅವನಿಗೆ ಪಿಶಾಚಿಯ ಬಾಧೆಯಾಗಿ ಅವನು ಅದರಿಂದ ಪರಿಪರಿಯ ಕಷ್ಟಗಳಿಗೆ ಗುರಿಯಾದನು. ಆಗ ಅವನು ಬೇಸತ್ತು ಮುಡಿವಾಳಸ್ವಾಮಿಗಳ ಸನ್ನಿಧಿಗೆ ಶರಣು ಬಂದನು. ಸ್ವಾಮಿಗಳವರು—ಕುರ್ಲಿಂಗಪ್ಪಾ, ಒಂದು ನೂರು ರೂಪಾಯಿಗಳನ್ನು ಕೊಟ್ಟರೆ ನಿನ್ನ ಪಿಶಾಚಿಯ ಬಾಧೆಯು ಹೋಗುವದು. ಎಂದು ನುಡಿದರು; ಸ್ವಾಮಿಗಳು ದುಡ್ಡು ಕೇಳುತ್ತಾರೆಂದು ಅವನು ಸ್ವಾಮಿಗಳನ್ನು ನಿಂದಿಸುತ್ತ ಮನೆಗೆ ಹೋದನು. ದುಡ್ಡಿನ ಮೋಹವು ಬಲು ಕೆಟ್ಟದು! ಆ ದುಡ್ಡು ಸ್ವಾಮಿಗಳಲ್ಲಿರುವ ಕುರ್ಲಿಂಗಪ್ಪನ ವಿಶ್ವಾಸವನ್ನು ತಪ್ಪಿಸಿತು. ಸ್ವಾಮಿಗಳ ನಿಂದೆಯ ಫಲದಿಂದ ಕುರ್ಲಿಂಗಪ್ಪನು ಮೂಕನಾದನು; ಆಗ ಅವನ ಹೆಂಡತಿಯು ಗಾಬರಿಯಾಗಿ ನೂರು ರೂಪಾಯಿಗಳನ್ನು ತಕ್ಕೊಂಡು ಸ್ವಾಮಿಗಳಿಗೆ ಶರಣುಹೋಗಿ ತಪ್ಪಾಯಿತೆಂದು ಅಡ್ಡಬಿದ್ದಳು. ಆ ಹೆಣ್ಣುಮಗಳ ದೈನ್ಯವನ್ನು ನೋಡಿ ಸ್ವಾಮಿಗಳು—"ಗಂಗವ್ವಾ ನಮ್ಮ ಪಾದರಕ್ಷೆಗಳನ್ನು ತಕ್ಕೊಂಡು ಹೋಗಿ ನಿನ್ನ ಗಂಡನ ತಲೆಗಿಂಬಿಗೆ ಇಡು; ಅಂದರೆ ನಿಮಗೆ ಕಲ್ಯಾಣವಾಗುವದು ಎಂದು ಹೇಳಿದರು. ಅದರಂತೆ ಆ ಸ್ತ್ರೀಯು ಮಾಡಿದಳು. ಕೂಡಲೆ ಕುರ್ಲಿಂಗಪ್ಪನ ಪಿಶಾಚಿಯು ಬಿಟ್ಟುಹೋಯಿತು ಮತ್ತೆ ಅವನು ಮಾತಾಡತೊಡಗಿದನು. ಕುರ್ಲಿಂಗಪ್ಪನು ಪಶ್ಚಾತ್ತಾಪಪಟ್ಟು ಮುಡಿವಾಳಸ್ವಾಮಿಯವರ ಬಳಿಗೆ

ಬಂದು—ಅಪ್ಪಾ, ನಾನು ಮೂರ್ಖನು, ನಿನ್ನ ದ್ರೋಹವನ್ನು ಮಾಡಿದೆನು; ಆದರೂ ನನ್ನ ಅಪರಾಧಗಳನ್ನು ಕ್ಷಮಿಸಿ, ನನಗೆ ಕಲ್ಯಾಣಮಾಡಿದೆ; ನೀನು ದೊಡ್ಡವನು; ನಿನ್ನ ಭಕ್ತವಾತ್ಸಲ್ಯವು ದೊಡ್ಡದು ಎಂದುಸ್ತವನ ಮಾಡಿದನು.

ಹೀಗೆ ಮಡಿವಾಳಪ್ಪನವರು ಭಕ್ತಹಿತದಕ್ಷರಾಗಿರಲು, ಒಮ್ಮೆ ಒಬ್ಬ ದಂಪತಿಗಳು ತಮಗೆ ಸಂತಾನವಾಗಬೇಕೆಂದು ಮಡಿವಾಳಸ್ವಾಮಿಗಳ ಕಡೆಗೆ ಬಂದರು. ಆ ದಂಪತಿಗಳ ಸೇವೆಯನ್ನು ನೋಡಿ ಮಡಿವಾಳಪ್ಪನವರು ಸಂತುಷ್ಟರಾದರು. ಅವರು ಒಂದು ದಿನ ಆ ದಂಪತಿಗಳನ್ನು ಹತ್ತರ ಕರೆದು, ಗಂಡನ ಸಮಕ್ಷವಾಗಿ ಆ ಸ್ತ್ರೀಯನ್ನು ಮಲಗಿಸಿ ಆಕೆಯ ಮೇಲೆ ಬಿದ್ದು ಸ್ತನಪಾನ ಮಾಡಿದರು. ಬಳಿಕ ಅವರು ಮೇಲಕ್ಕೆ ಎದ್ದು ತಾಯೀ ನಾನೇ ನಿನ್ನ ಮಗನು ನಿನ್ನ ಮೊಲೆಯಹಾಲನ್ನು ಯಥೇಷ್ಟವಾಗಿ ಕುಡಿದು ಸಂತುಷ್ಟನಾದೆನು; ನಿನಗೆ ಇನ್ನು ಮೇಲೆ ಸಂತತಿಯಾಗುವದು ಎಂದು ಆಕೆಗೆ ಆಶೀರ್ವಾದವ ಮಾಡಿದರು. ಬಹುದಿವಸ ಮಕ್ಕಳನ್ನು ಕಾಣದ ಆ ಬಂಜೆಸ್ತ್ರೀಯ ಮೊಲೆಯಲ್ಲಿ ಹಾಲು ಬಿದ್ದದ್ದನ್ನು ನೋಡಿ ಎಲ್ಲರಿಗೂ ಪರಮಾಶ್ಚರ್ಯವೆನಿಸಿತು. ಭಕ್ತರ ಮನೋರಥದ ಪರಿಪೂರ್ಣತೆಗಾಗಿ ಅಪ್ಪನವರು ಏನೇನು ಆಟವಾಡುವರೋ ತಿಳಿಯದೆಂದು ಭಾವಿಕರು ಅಂದುಕೊಂಡರು. ಬಳಿಕ ಆ ದಂಪತಿಗಳು ಸ್ವಾಮಿಗಳವರ ಅಪ್ಪಣೆ ಪಡೆದು ಊರಿಗೆ ಹೋದರು. ಮಡಿವಾಳಪ್ರಭುವಿನ ಕೃಪೆಯಿಂದ ಅವರಿಗೆ ಪುತ್ರೋತ್ಪತ್ತಿಯಾಯಿತು. ಅವರು ಆ ಮಹಾತ್ಮನ ನಾಮಗಾನ ಮಾಡುತ್ತ ಸುಖದಿಂದ ಸಂಸಾರ ಮಾಡಿ ಧನ್ಯರಾದರು. ಭಕ್ತರ ಕಾಮಧೇನು ಕಲ್ಪವೃಕ್ಷದಂತಿರುವ ನಮ್ಮ ಮಡಿವಾಳಸ್ವಾಮಿಯವರ ಅನುಗ್ರಹಕ್ಕೆ ಪಾತ್ರರಾದವರಲ್ಲಿ, ಮಕ್ಕಳಿಲ್ಲದವರು ಸಂತತಿಯನ್ನು ಹೊಂದಿದರು, ರೋಗಿಗಳು ನಿರಾಮಯರಾದರು. ಬಡವರು ಧನಿಕರಾದರು. ಮೂರ್ಖರು ಪಂಡಿತರಾದರು. ಅಭಾವಿಕರು ಭಾವಿಕರಾದರು. ನಿರ್ವೀರ್ಯರು ವೀರ್ಯವಂತರಾದರು. ಹೀಗೆ ಹಲವರಿಗೆ ಹಲವು ಬಗೆಯಿಂದ ಅವರವರ ಇಷ್ಟದಂತೆ ಫಲವಾಗುತ್ತ ನಡೆಯಲು ಮಡಿವಾಳ ಪ್ರಭುವಿನ ಭಕ್ತಸಂರಕ್ಷಣದ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು.



## ಹದಿಮೂರನೆಯ ಪ್ರಕರಣ.

# ಸದುಪದೇಶ.

—[೦]—



ಕ್ತವತ್ಸಲರಾದ ಮಡಿವಾಳಪ್ಪನವರು ಲೋಕೋದ್ಧಾರಾರ್ಥವಾಗಿ ಜ್ಞಾನಬೋಧವನ್ನು ಸಾಗಿಸುತ್ತಿದ್ದರು. ಅವರ ಅರ್ಥಪೂರ್ಣವಾದ ದಿವ್ಯವಾಣಿಯಿಂದ ಹೊರಡುವ ಸುಲಭ ಬೋಧವನ್ನು ಕೇಳಿ ಭಾವಿಕರು ಸಂತುಷ್ಟರಾಗುತ್ತಿದ್ದರು. ಆ ಮಹಾತ್ಮರು ಘನವಿದ್ವಾಂಸರಾದಾಗ್ಯೂ ಪಾಮರರನ್ನು ಉದ್ಧರಿಸುವದಕ್ಕಾಗಿ ಕೇವಲ ಪ್ರಾಕೃತ ಭಾಷೆಯಿಂದ ಜ್ಞಾನರಹಸ್ಯವನ್ನು ತಿಳುಹಿಸಿ ಕೊಡುತ್ತಿದ್ದರು. ಅವರ ವಿಷಯ ವಿವೇಚನದ ಪದ್ಧತಿಯು, ಹವಣಿಯಾದ ತುತ್ತುಗಳನ್ನು ಮಾಡಿ ಉಣ್ಣಿಸುವ ತಾಯಿಯ ಪ್ರೇಮವನ್ನು ಅನುಸರಿಸುತ್ತಿತ್ತು. ಅವರ ಉಪದೇಶದ ಒಂದೆರಡು ಮಾದರಿಗಳನ್ನು ನಮ್ಮ ವಾಚಕರಿಗಾಗಿ ಇಲ್ಲಿ ಉದಹರಿಸುವೆವು.

ಮಡಿವಾಳಸ್ವಾಮಿಗಳವರು ಬೋಧ ಮಾಡುವಾಗ ಬಹುಶಃ ನಾವು ಹಿಂದೆ ಹೇಳಿದ ಸಿದ್ಲಿಂಗಸ್ವಾಮಿಯನ್ನೇ ಕುರಿತು ಮಾಡುತ್ತಿದ್ದರು:—"ಈ ರೀತಿಯಾಗಿ ಬೋಧವು ನಡೆದಾಗ ಅವರು ಹೇಳುತ್ತಿದ್ದದ್ದೇನಂದರೆ—"ಎಲಾ ಸಿದ್ಧಲಿಂಗಾ, ಈಗಿನ ಕಾಲದಲ್ಲಿ ವೇದಾಂತಿಗಳು ಬಹಳ; ಮನೆಮನೆಗೆ ವೇದಾಂತಿಗಳಾಗಿರುವರು; ಇಂಥ ವೇದಾಂತಿಗಳು ಮನೆಗೆ ಬಂದರೆ, ದೂರದಿಂದಲೇ ಅವರಿಗೆ ಏನಾದರೂ ನೀಡಿ ಕಳುಹಿಸಿ ಕೊಡಬೇಕು. ಅಂಥವರ ಗಾಳಿ ಕೂಡ ತಗಲದಂತೆ ಎಚ್ಚರ ಪಡಬೇಕು!" ಪ್ರಿಯವಾಚಕರೇ, ಮೇಲಿನ ಈ ಬೋಧದಲ್ಲಿ ಎಷ್ಟು ರಹಸ್ಯವಿರುವದೆಂಬದು ನಿಮಗೆ ಹೊಳೆದಿರಬಹುದಲ್ಲವೇ? ಈಗಿನ ಕಾಲದಲ್ಲಿ ಸಮಾಜದಲ್ಲಿ ಹರಡಿಕೊಂಡಿರುವ ಮರುಳ-ದುರುಳ ವೇದಾಂತಿಗಳನ್ನು ಕಂಡು ಮಡಿವಾಳಪ್ಪನವರಿಗೆ ಬಹು ಅಸಮಾಧಾನವಾಗುತ್ತಿತ್ತು. ಮಂದಿಯನ್ನು ಮೋಸಗೊಳಿಸುವದಕ್ಕಾಗಿಯಾಗಲಿ, ಕ್ಷುಲ್ಲಕ ಸ್ವಕಾರ್ಯ ಸಾಧನಕ್ಕಾಗಿಯಾಗಲಿ ಸ್ವಾರ್ಥಪರಾಯಣರು ವೇದಾಂತಿಗಳ ವೇಷ ಹಾಕುವರೆಂಬದು ಮಡಿವಾಳಪ್ಪನವರಿಗೆ ಪೂರ್ಣವಾಗಿ ಮನವರಿಕೆಯಾಗಿತ್ತೆಂದು ಹೇಳಬಹುದು. ಇಂಥ ವೇದಾಂತಿಗಳ ಸವಿಮಾತಿಗೆ ಮರುಳಾಗಿ, ಅನಾಚಾರಕ್ಕೀಡಾದ ಸ್ತ್ರೀ-ಪುರುಷರು ಹೇರಳವಾಗಿ ಸಿಗುವರು. ಆದ್ದರಿಂದಲೇ ಮಡಿವಾಳಪ್ಪನವರು ತಮ್ಮ ಶಿಷ್ಯ

ರಿಗೆ ಯಾವಾಗಲೂ ಎಚ್ಚರಕೊಡುತ್ತಿದ್ದರು. ಸರಳ ಅಥವಾ ನಿಜವಾದ ವೇದಾಂತಿಯು ಅರ್ಥಾತ್ ಪರಮ ವೈರಾಗ್ಯಶಾಲಿಯು ದುರ್ಲಭನೆಂದು ಮುಡಿವಾಳಪ್ಪನವರು ಅನ್ನುತ್ತಿದ್ದರು. ಮರುಳತನದಿಂದ ಇಲ್ಲವೆ ದುರಳತನದಿಂದ ವೇದಾಂತ ಮಾರ್ಗಾವಲಂಬಿಗಳಾಗಿ ಕೆಡುವದಕ್ಕಿಂತ ಸಾಂಸಾರಿಕರಾಗಿರುವದು ಮೇಲಾದದ್ದೂ-ಪರಮಶ್ರೇಯಸ್ಸಾಧನವಾದದ್ದೂ ಎಂದು ಆ ಮಹಾತ್ಮರು ಕಂಠರವದಿಂದ ನುಡಿಯುತ್ತಿದ್ದರು.

ಯಾವದೊಂದು ಪದಾರ್ಥವು ಎಷ್ಟು ಹೇರಳವಾಗಿದ್ದರೇನು? ಎಷ್ಟು ಅಗ್ಗವಾದರೇನು? ಆ ಪದಾರ್ಥದ ವಿಷಯವಾಗಿ ಗ್ರಾಹಕರಲ್ಲಿ ಪ್ರೇಮಾದರಗಳು ಇದ್ದಮಾನದಿಂದಲ್ಲವೇ ಅದರ ಪ್ರಸಾರವಾಗುವದು! ಈಗಿನ ಕಾಲದಲ್ಲಿ ಪಾಶ್ಚಾತ್ಯಸುಧಾರಣೆಯಿಂದ ಮುದ್ರಣದ ಸಾಧನಸೌಕರ್ಯವು ಹೆಚ್ಚಾಗಿ, ಬೇಕು,—ಬೇಕಾದಂಥ ಗ್ರಂಥಗಳು ಮುದ್ರಿಸಲ್ಪಟ್ಟಿರುವದರಿಂದ ಈಗಿನ ಕಾಲದಲ್ಲಿಯೇ ವಿದ್ಯಾಪ್ರಸಾರವು ಹೆಚ್ಚೆಂದು ಒಬ್ಬ ಭಕ್ತನು ಮುಡಿವಾಳಪ್ಪನವರ ಮುಂದೆ ನುಡಿದನು. ಆಗ ಅವನ ಮಾತುಗಳನ್ನು ಕೇಳಿ ಮುಡಿವಾಳಪ್ಪನವರು ನಸುನಕ್ಕು—ಅಪ್ಪಾ ಶಿಷ್ಯೋತ್ತಮನೇ, “ದುಡ್ಡಿಗೆ ನೂರು ಕುಳ್ಳುಗಳಾದರೆ ಸುಟ್ಟುಕೊಂಡು ಸಾಯುವವರಾರು” ಎಂದು ಅಂದರು. ಈ ಮೇಲಿನ ಬಹು ಸಮಂಜಸವಾದ ಬೋಧದಿಂದ ಭಕ್ತನು ಸಮಾಧಾನಪಟ್ಟನು. ದೇಹವನ್ನು ಶುಷ್ಕವಾಗಿ ಮಾಡಿ ಜ್ಞಾನಭಾಂಡಾರವನ್ನು ಬೆಳೆಯಿಸುವದು ಸುಲಭಸಾಧ್ಯವಲ್ಲೆಂಬ ಭಾವನೆಯು ಅವನಲ್ಲಿ ಹುಟ್ಟಿತು. ದೇವರ ಸೇವೆಯೆಂದರೇನೆಂಬದರ ಹಾಗೂ ಗುರುಸೇವೆಯೆಂದರೇನೆಂಬದರ ಗುರುತು ಇಲ್ಲದ ಬಾಯ್ಬಡಕರು ಮಾತ್ರ ತಮ್ಮ ಪೊಳ್ಳು ಪ್ರತಿಷ್ಠೆಗೆ ಬೀಳುವರಲ್ಲದೆ, ನಿಜವಾದ ಸಜ್ಜನರು ಬೀಳುವದಿಲ್ಲ. ಬರಿಯ ಪುಸ್ತಕಗಳು ಬಹಳವಾದರೇನು? ಜನರಲ್ಲಿ ಧರ್ಮಜಿಜ್ಞಾಸೆಯು ಇದ್ದರಷ್ಟೇ.

ಮುಡಿವಾಳಪ್ಪನವರು ಠಕ್ಕ ಸಾಧುಗಳನ್ನೂ, ಮರುಳ ವೇದಾಂತಿಗಳನ್ನೂ ಬೈಲಿಗೆಳೆದು ಅವರನ್ನು ಸನ್ಮಾರ್ಗಕ್ಕೆ ಹಚ್ಚುತ್ತಿದ್ದರು. ಧರ್ಮಲಂಡತನವೂ ಚಾರ್ವಾಕತೆಯೂ ಅವರಿಗೆ ಕೇವಲ ನಿಂದ್ಯವಾಗಿದ್ದವು. ತಮ್ಮ ಶಿಷ್ಯರು ಸನ್ಮಾರ್ಗದಲ್ಲಿ ರತವಾಗಿರುವಂತೆ ಅವರು ಯಾವಾಗಲೂ ಈಶ್ವರೀಲೀಲೆಗಳನ್ನು ವರ್ಣಿಸುತ್ತಿದ್ದರು.

ಒಮ್ಮೆ ಧಾರವಾಡದ ಕಲೆಕ್ಟರಸಾಹೇಬಬಹಾದ್ದೂರವರು ಗರಗಕ್ಕೆ ಬಂದಾಗ ಮುಡಿವಾಳಪ್ಪನವರ ದಿಗಂಬರರೂಪವನ್ನು ನೋಡಿ ಸಾಹೇಬರವರು

ಸಿಟ್ಟಿಗೆದ್ದರು. ಆಗ ಅವರು ತಮ್ಮ ಅಧಿಕಾರದ ಬಲದಿಂದ ಮಡಿವಾಳಪ್ಪನವರಿಗೆ ದೋತರವನ್ನುಟ್ಟುಕೊಳ್ಳಲಿಕ್ಕೆ ಹುಕುಮು ಮಾಡಿದರು. ಸುಮಾರು ಅರ್ಧಶತ ಮಾನದ ವರೆಗೆ ದಿಗಂಬರರಾಗಿ ನಿರ್ಭಯದಿಂದ ಇದ್ದ ಮಡಿವಾಳಪ್ಪನವರು ಸಾಹೇಬಬಹಾದ್ದೂರರವರ ಅಪ್ಪಣೆಯನ್ನು ಮನ್ನಿಸಿ ವಸ್ತ್ರಪರಿಧಾನ ಮಾಡಿದರು; ಬಾಯಿಯಿಂದ ಒಂದೂ ಚಕಾರಶಬ್ದವನ್ನುಚ್ಚರಿಸಲಿಲ್ಲ. ದೊಡ್ಡವರು ಬರಿಯ ಬಾಷ್ಕಳಪಂತರಂತೆ ಮಾತಾಡುತ್ತಿರುವದಿಲ್ಲ. ಬಳಿಕ ಸಾಹೇಬರವರು ಮಡಿವಾಳಪ್ಪನವರ ಮಠವನ್ನು ಬಿಟ್ಟು ಹೊರಟರು. ಅವರು ಮುಂದಕ್ಕೆ ತುಸು ದೂರಹೋಗಿ, ಏನಾಯಿತೋ ಏನೋ ಮತ್ತೆ ತಿರುಗಿ ಕುದುರೆಯನ್ನೋಡಿಸುತ್ತ ಮಠಕ್ಕೆ ಬಂದು—ಮಡಿವಾಳಪ್ಪನವರಿಗೆ ವಸ್ತ್ರವನ್ನು ಕಳೆದು ದಿಗಂಬರರಾಗಿಯೇ ಇರಲಿಕ್ಕೆ ಸೂಚಿಸಿದರು. ಆಗ ಮಡಿವಾಳಪ್ಪನವರು ತಮ್ಮ ಶಿಷ್ಯಮಂಡಲಿಯನ್ನು ಕುರಿತು—ತಮ್ಮಾ ಗಂಟೆಣ್ಣಾ, ಸಿದ್ಧಲಿಂಗಣ್ಣಾ ನೋಡಿದಿರಾ ಜಗದ್ವ್ಯಾಪಾರ ಹ್ಯಾಗದೆ? "ಅವಾ(ಸಾಹೇಬ) ಒತ್ತಿದಾ ನಾ, ಸರದೆ; ಶಿವಾ ಒತ್ತಿದಾ ಅವಾ(ಸಾಹೇಬ) ಸರದಾ;" ಒತ್ತಿದರ ಸರಿಯಣ್ಣಾ, ಸರದರ ಒತ್ತಣ್ಣಾ, ನೋಡು ಹೀಗದೆ? ಸೇರಿಗೆ ಸವ್ವಾಸೇರು ಆಗದೆ ಯಾರೂ ಬಗ್ಗುವದಿಲ್ಲ, ಎಂದು ನುಡಿದರು.

ಪ್ರಿಯವಾಚಕರೇ, ಮೇಲಿನ ಈ ಸಂಗತಿಯಿಂದ ಮಡಿವಾಳಪ್ಪನವರಲ್ಲಿ ರಾಜಸತ್ತೆಯಲ್ಲಿದ್ದ ಅಭಿಮಾನವೂ, ವಿಲಕ್ಷಣವಾದ ದೈವೀಸಾಮರ್ಥ್ಯದಿಂದ ರಾಜತೇಜವನ್ನು ಕೂಡಾ ಕುಗ್ಗಿಸುವ ಅಲೌಕಿಕತೆಯೂ ಎಷ್ಟರಮಟ್ಟಿಗೆ ಇದ್ದವೆಂಬದು ಸ್ಪಷ್ಟವಾಗಿ ಕಂಡುಬರುತ್ತದೆ. ಆ ಮಹಾತ್ಮರು ಜನರನ್ನು ಕುರಿತು—ಧೈರ್ಯವಂತರಾಗಿರೆಂದು ಮೇಲಿಂದ ಮೇಲೆ ಬೋಧಿಸುತ್ತಿದ್ದರು. ಅವರ ಗಂಭೀರವಾದ ವೃತ್ತಿಯಿಂದ ಈ ಮಹತ್ತರವಾದ ಬೋಧವು ಜನರ ಮನಸ್ಸಿನ ಮೇಲೆ ಬಹುಬೇಗ ಪರಿಣಾಮವಾಗುತ್ತಿತ್ತು. ಭೂತವಾತ್ಸಲ್ಯವು ಪ್ರತಿಯೊಬ್ಬನಲ್ಲಿ ಇರಲೇಬೇಕೆಂದು ಆ ಮಹಾನುಭಾವರು ಸಾರಿ ಸಾರಿ ಹೇಳುತ್ತಿದ್ದರು. ಮಠದಲ್ಲಿ ಒಮ್ಮೆ ಸಣ್ಣ ಮರಿದೇವರು ಬೆಕ್ಕಿನ ಮರಿಯನ್ನು ವಿನೋದಾರ್ಥವಾಗಿ ಹಳ್ಳದಲ್ಲ ಚಲ್ಲಿದರು. ಆ ಬಡಪ್ರಾಣಿಯು ಮಡುವಿನಲ್ಲಿ ಬಿದ್ದು ಒದ್ದಾಡುತ್ತಿರುವದನ್ನು ನೋಡಿ ಶಿಷ್ಯರು ಓಡಿಬಂದು ಮಡಿವಾಳಪ್ಪನವರಿಗೆ ತಿಳಿಸಿದರು. ಕೂಡಲೆ ಆ ಮಹಾತ್ಮರು—"ಅಜ್ಜಾ ಬಾಬಾ" ಎಂದು ನಾಮಸ್ಮರಣಮಾಡಿ ಅಲ್ಲಿಗೆ ಬಂದರು. ಆಗ ಅವರು ಮರಿದೇವರಿಗೆ ಭೂತದಯೆಯಬಗ್ಗೆ ಚೆನ್ನಾಗಿ

ಬೋಧಮಾಡಿ, ಪುನಃ ಅಜ್ಞಾ ಬಾಬಾ ಎಂದು ನುಡಿದು ಆ ಬೆಕ್ಕಿನಮರಿಯನ್ನು ಮೇಲಕ್ಕೆ ಕರೆದರು. ಆ ಬೆಕ್ಕಿನ ಮರಿಯು ಏನೂ ಅಪಾಯವನ್ನು ಹೊಂದದೆ ಸುರಕ್ಷಿತವಾಗಿ ನೀರು ಬಿಟ್ಟು ಬಂದಿತು. ಮೂಕಪ್ರಾಣಿಗಳನ್ನು ಸಂರಕ್ಷಿಸು ವದು ಮನುಷ್ಯನಿಗೆ ಕಲ್ಯಾಣಕಾರಕವಾದದ್ದೆಂದು ಆ ಮಹಾತ್ಮರು ಎಲ್ಲ ಜನ ರಿಗೂ ಹೇಳಿದರು. ಮಡಿವಾಳಪ್ಪನವರ ಸದುಪದೇಶದಿಂದ ಮರಿದೇವರಿಗೆ ಪಶ್ಚಾ ತ್ತಾಪವಾಗಿ ಅವರು ಇನ್ನೊಮ್ಮೆ ಇಂಥ ಕೆಲಸಮಾಡಬಾರದೆಂದು ನಿಶ್ಚ ಯಿಸಿದರು.

ತಮ್ಮ ಭಕ್ತವರ್ಗದಲ್ಲಿ ಯಾರಾದರೂ ತಪ್ಪುಮಾಡಿದರೆ ಮಡಿವಾಳಪ್ಪನ ವರು ಅವರಿಗೆ ಗಣಾರಾಧನೆಯನ್ನು ಮಾಡುವ ದಂಡನೆಯನ್ನು ವಿಧಿಸುತ್ತಿದ್ದರು. ಅವರ ಈ ಪದ್ಧತಿಯಿಂದ ಭಕ್ತವರ್ಗದಲ್ಲಿ ಪ್ರಸ್ತಪ್ರಯೋಜನಗಳು ದೇವತಾ ಉತ್ಸವಗಳು ಹೆಚ್ಚಿದವು. ಜನರಲ್ಲಿ ಸದಾಚಾರವು ಬೆಳೆಯಿತು. ದೈವೀ ನಿಷ್ಠೆಯು ಅಂಕುರಿಸಿತು; ಭಜನ ಪುರಾಣಾದಿಗಳು ಅಲ್ಲಲ್ಲಿ ನಡೆಯಹತ್ತಿದವು. ಲೋಕವ ನ್ನುದ್ಧರಿಸಲು ಸಜ್ಜನರ ಸದುಪದೇಶವಲ್ಲದೆ ಇನ್ನಾವುದು ಶಕ್ಯವಾಗುವದು?

---

ಹದಿನಾಲ್ಕನೆಯ ಪ್ರಕರಣ.

## ಸತ್ಪುರುಷರ ಸಮಾಗಮವು.



ಈ ಮೇರೆಗೆ ಮಡಿವಾಳಪ್ಪನವರು ಸದ್ಭಕ್ತರನ್ನು ಸಂರಕ್ಷಿಸುತ್ತ ಸದುಪದೇಶದಿಂದ ಅವರ ಅಜ್ಞಾನವನ್ನು ನೀಗಲಾಡುತ್ತ ಇರುತ್ತಿರಲು ಒಮ್ಮೆ ಶ್ರೀ ನಾಗಲಿಂಗಪ್ಪನವರು ಗರಗಕ್ಕೆ ಬಂದರು. ಈ ನಾಗಲಿಂಗಪ್ಪನವರು ನವಲಗುಂದದವರು, ಇವರ ಪ್ರಖ್ಯಾತಿಯು ನಮ್ಮ ಕರ್ನಾಟಕದ ಸಂದಿಗೊಂದಿ ಗಳಲ್ಲಿಯೂ ವ್ಯಾಪಿಸಿರುವದು. ಇಂಥ ಮಹಂತ ಸತ್ಪುರುಷರು ಊರಿಗೆ ಬಂದ ಸುದ್ದಿಯನ್ನು ಕೇಳಿ, ಮಡಿವಾಳಪ್ಪನವರು ತಮ್ಮ ಶಿಷ್ಯರನ್ನು ಕುರಿತು ಮಠದ ಬಾಗಿಲ ಹಾಕಲಿಕ್ಕೆ ಹೇಳಿದರು. ದೊಡ್ಡವರ ಹೃದಯವು ದೊಡ್ಡವರಿಗೇ ಗೊತ್ತಿ ಲ್ಲದೆ ನಮ್ಮಂಥ ಪಾಮರರಿಗೆ ತಿಳಿಯಲಾರದು. ಶ್ರೀ ನಾಗಲಿಂಗಪ್ಪನವರುನೆಟ್ಟಗೆ ಮಡಿವಾಳಪ್ಪನವರ ಮಠಕ್ಕೆ ಬಂದರು; ನೋಡುತ್ತಾರೆ ಬಾಗಿಲವು ಬಂದಮಾಡ

ಲ್ಪಟ್ಟಿತ್ತು; ಆಗ ನಾಗಲಿಂಗಪ್ಪನವರು ಬಾಗಿಲ ತೆರೆಯಿರೆಂದು ಒಳಗಿನವರನ್ನು ಒದರಹತ್ತಿದರು. ಮಡಿವಾಳಪ್ಪನವರು ತಾವೇಸ್ವತಃ ನಾಗಲಿಂಗಪ್ಪನವರಿಗೆಬಿ, ಕೊಟ್ಟು ಬಾಗಿಲ ತೆರೆಯುವದಿಲ್ಲ. ಇಲ್ಲಿ ನಿನ್ನ ಕೆಲಸವೇನಿದೆ? ಹೋಗು ಸುಮ್ಮನೆ; ಎಂದು ನುಡಿದರು. ಆದರೆ ನಾಗಲಿಂಗಪ್ಪನವರು ಬಾಗಿಲು ತೆರೆಯಲೇಬೇಕೆಂದು ಹಟಹಿಡಿದರು. ಮಡಿವಾಳಪ್ಪನವರು ಬಾಗಿಲ ತೆರೆಯಲೊಲ್ಲರು; ಈ ಗೊಂದಲದಲ್ಲಿ ಎಷ್ಟೋ ವೇಳೆಯು ಕಳೆದು ಹೋಯಿತು. ನಾಗಲಿಂಗಪ್ಪನವರು ಬಾಗಿಲ ತೆಗೆಯುವದರ ಸಲುವಾಗಿ ದುಂಬಾಲ ಬಿದ್ದು—ಮಡಿವಾಳಾ, ನಿನ್ನ ಕಣ್ಣುಗಳು ಹೋಗಿರುವವೆಂದು ಕೇಳಿರುವೆನು, ನಾನು ನಿನ್ನ ಕಣ್ಣುಗಳನ್ನುನೆಕ್ಕಿ ನಿನಗೆ ಕಣ್ಣು ಕೊಡುವೆನು. ಬಾಗಿಲ ತೆರೆಯಬಾರದೇ? ಎಂದು ಒಂದೇ ಸವನೆ ಕೂಗಹತ್ತಿದರು. ಮಡಿವಾಳಪ್ಪನವರು ನಸುನಕ್ಕು—ನನ್ನ ಕಣ್ಣುಗಳನ್ನೇನು ನೆಕ್ಕುವಿ? ದೇಶದ ಮೇಲೆ ಅನೇಕ ಜನ ಕುರುಡರಿರುವರು. ಅವರ ಕಣ್ಣುಗಳನ್ನೆಲ್ಲ ನೆಕ್ಕಬಾರದೇ, ಎಂದು ಅಂದು ಬಾಗಿಲ ತೆಗೆಯಿಸಿದರು. ನಾಗಲಿಂಗಪ್ಪನವರು ಒಳಗೆ ಪ್ರವೇಶ ಮಾಡಿದರು.

ಈ ಕಾಲಕ್ಕೆ ಮಡಿವಾಳಪ್ಪನವರು ವೃದ್ಧರಾಗಿದ್ದರಿಂದ ಅವರ ಕಣ್ಣುಗಳು ಬಹಿರ್ವ್ಯಾಪಾರವನ್ನು ನೋಡಲಾರದವಾಗಿದ್ದವು. ಶ್ರೀನಾಗಲಿಂಗಪ್ಪನವರು ಬರಲು ಅವರು ತಮ್ಮ ಇಚ್ಛಾಮಾತ್ರದಿಂದ ಕಣ್ಣುಗಳಲ್ಲಿ ನೋಡುವ ಸಾಮರ್ಥ್ಯವನ್ನು ತಂದುಕೊಂಡರು. ಅವರಿಬ್ಬರು ಸತ್ಪುರುಷರ ಸಮಾಗಮಸುಖವು ಅಪೂರ್ವವಾಯಿತು. ಬಳಿಕ ಕೆಲಹೊತ್ತಿನ ಮೇಲೆ ನಾಗಲಿಂಗಪ್ಪನವರು ಮಡಿವಾಳಪ್ಪನವರಿಗೆ ಶರಣು ಮಾಡಿ ಹೊರಟು ಹೋದರು.

ಒಂದಾನೊಂದು ದಿನ ಒಬ್ಬ ತರುಣನು ಮಡಿವಾಳಪ್ಪನವರ ದರ್ಶನಕ್ಕೆ ಬಂದನು. ಆ ತರುಣನು ಸ್ವಾಮಿಗಳವರಿಗೆ ಸಾಷ್ಟಾಂಗನಮಸ್ಕಾರವನ್ನು ಹಾಕಿ ಕುಳಿತುಕೊಂಡನು. ಆಗ ಮಡಿವಾಳಪ್ಪನವರು ಅವನನ್ನು ಕುರಿತು—ನೀನು ಯಾರಪ್ಪಾ, ನಿನ್ನ ಹೆಸರು ಏನು? ಎಂದು ಕೇಳಿದರು ತರುಣನು—"ನನ್ನ ಹೆಸರು ಸಿದ್ಧಪ್ಪಾ" ಎಂದು ಹೇಳಲು, ಇಲ್ಲಿಗೆ ಯಾಕೆ ಬಂದಿ? ಎಂದು ಪುನಃ ಸ್ವಾಮಿಗಳವರು ನುಡಿದರು. ಅದಕ್ಕೆ ತರುಣನು—

ತರುಣ—ನಿಮ್ಮ ದರ್ಶನದ ಸಲುವಾಗಿ;

ಮಡಿವಾಳಪ್ಪ—ದರ್ಶನವಾಯಿತಲ್ಲಾ ಹಾಗಾದರೆ ಇನ್ನು ನೀನು ಹೋಗಬಹುದಲ್ಲವೇ!

ತರುಣ—ನಾಲ್ಕುದಿನ ನಿಮ್ಮ ಸೇವೆಮಾಡಬೇಕೆಂದು ಇಚ್ಛಿಸಿದ್ದೇನೆ;

ಮಡಿವಾಳಪ್ಪ—ನಮ್ಮ ಸೇವೆಯನ್ನು ಮಾಡಬಂದ ನೀನು ಹೊಟ್ಟೆಗೆ ಹ್ಯಾಗೆ ಮಾಡುವೆ?

ತರುಣ—ಊರಲ್ಲಿ ಕಂತಿಭಿಕ್ಷೆ ಬೇಡಿಕೊಂಡು ಬಂದು ಈ ಹಳ್ಳದದಂಡೆಯ ಮೇಲೆ ಕೂತು ತಿನ್ನುವೆನು.

ಮಡಿವಾಳಪ್ಪ—ಹಾಗಾದರೆ ನೀನು ಬಹಳಚಲೋ ಇದ್ದಿಯಪ್ಪಾ; ನಮ್ಮಲ್ಲೇ ಇರು. ಇಂಥವರೇ ನಮಗೆ ಬೇಕು. ಭಿಕ್ಷಾಬೇಡಿ ತಂದ ರೊಟ್ಟಿಗಳಲ್ಲಿ ನನಗೂ ಅರ್ಧಾ ಕೊಡುತ್ತ ಹೋಗಬೇಕು!

ತರುಣ—ಗುರುಗಳಿಗೆ ಅರ್ಪಿಸದಲೆ ತಿನ್ನುವೆನೆ?

ಈ ಮೇರೆಗೆ ಸಂಭಾಷಣಗಳಾದ ಬಳಿಕ ಸಿದ್ಧಪ್ಪನು ಮಠದಲ್ಲಿ ವಾಸಮಾಡಿದನು. ಸಿದ್ಧಪ್ಪನ ಯೋಗ್ಯತೆಯನ್ನು ಕಂಡು ಮಡಿವಾಳಪ್ಪನವರಿಗೆ ಬಲು ಸಂತೋಷವಾಯಿತು. ಸಿದ್ಧಪ್ಪನು ಗುರುಚಾಕರಿಯನ್ನು ಬಹು ಆಸ್ಥೆಯಿಂದ ಮಾಡುತ್ತಿದ್ದನು. ಹೀಗಿರಲು ಒಂದು ದಿನ ಮಡಿವಾಳಪ್ಪನವರು ಸಿದ್ಧಪ್ಪನನ್ನು ಹತ್ತರ ಕರೆದು—"ತಮ್ಮಾ ಸಿದ್ಧಪ್ಪಾ, ನಿನ್ನಲ್ಲಿ ಸಾಧುತ್ವವು ಜನ್ಮದಾರಭ್ಯ ನೆಲೆಯೂರಿರುವದು. ನೀನು ಮುಂದೆ ಬಹು ದೊಡ್ಡ ಸತ್ಪುರುಷನಾಗುವಿ; ನಿನ್ನ ಈ ವೈರಾಗ್ಯಪರ ನಡತೆಯನ್ನು ನೋಡಿ ನನಗೆ ಪರಮಾಲ್ಹಾದವಾಗುತ್ತದೆ, ನೀನು ಹುಬ್ಬಳ್ಳಿಗೆ ಹೋಗಿ ಅಲ್ಲಿಯೇ ನಿಜಾನಂದದಲ್ಲಿ ಸುಖವಾಗಿ ಇರು; ನಿನ್ನ ಪ್ರಸಿದ್ಧಿಯಾಗುವದು'' ಎಂಬದಾಗಿ ನುಡಿದು, ಹುಬ್ಬಳ್ಳಿಗೆ ಹೋಗಲು ಸೂಚಿಸಿದರು. ಆ ಕೂಡಲೆ ಸಿದ್ಧಪ್ಪನು ಮಡಿವಾಳಪ್ಪನವರಿಗೆ ಪೊಡಮೊಟ್ಟು ಅವರ ಅನುಗ್ರಹವನ್ನು ಪಡೆದು ಹುಬ್ಬಳ್ಳಿಗೆ ಬಂದನು.

ಪ್ರಿಯವಾಚಕರೇ, ಈ ಸಿದ್ಧಪ್ಪನು ಯಾರೆಂಬದು ನಿಮಗೆ ತಿಳಿಯಿತೋ ಅಥವಾ ನಾನು ಹೇಳಲೋ? ಸ್ಪಷ್ಟವಾಗಿ ಹೇಳಿಯೇ ಬಿಡುವೆನು ಕೇಳಿರಿ; ನಿಮ್ಮನ್ನು ಗೊಂದಲದಲ್ಲಿ ನೂಕುವ ಸಾಹಸವಾದರೂ ಯಾಕೆ? ಈಗ ಹುಬ್ಬಳ್ಳಿಯಲ್ಲಿ ಅದೇಕೆ ದಿಗಂತದಲ್ಲಿ ಸುಪ್ರಖ್ಯಾತಿಯನ್ನು ಪಡೆದ, ತಮ್ಮ ದೈವೀಸಾಮರ್ಥ್ಯದ ಬೆಳಕನ್ನು ಸುತ್ತಲೂ ಹಬ್ಬಿಸಿದ ಶ್ರೀಸಿದ್ಧಾರೂಢಸ್ವಾಮಿಯವರೇ ಆ ನಮ್ಮ ಸಿದ್ಧಪ್ಪನು- ಮಡಿವಾಳಗುರುಗಳ ಪರಮಾನುಗ್ರಹವು ಸಿದ್ಧಾರೂಢರ ಮೇಲೆ ಸಂಪೂರ್ಣವಾಗಿ ಇತ್ತು; ಅವರ ಅಪ್ಪಣೆಯಂತೆ ಹುಬ್ಬಳ್ಳಿಯಲ್ಲಿ ವಾಸಮಾಡಿ ಸಿದ್ಧಾರೂಢರು ಲೋಕವಿಖ್ಯಾತರಾಗಿರುವರು.

ಗರಗದಲ್ಲಿದ್ದಾಗ ಮುಡಿವಾಳಪ್ಪನವರಿಗೆ ಅನೇಕಮಂದಿ ಸತ್ಪುರುಷರು ಭೆಟ್ಟಿಯನ್ನು ಕೊಟ್ಟು ಹೋಗುತ್ತಿದ್ದರು. ಒಮ್ಮೆ ನಮ್ಮ ಅಗಡಿಯ ಶ್ರೀಶೇಷಾಚಲ ಸದ್ಗುರುಗಳು ಗರಗಕ್ಕೆ ಬಂದರು. ಆಗ ಮುಡಿವಾಳಪ್ಪನವರು ತೀರವೃದ್ಧರಾಗಿದ್ದರು. ಅವರು ಸ್ವಸ್ಥವಾಗಿ ಮಠದಲ್ಲಿ ಕುಳಿತಿರಲು, ಶ್ರೀಶೇಷಾಚಲಸಾಧುಗಳು ಅವರ ದರ್ಶನಕ್ಕೆ ಬಂದರು. ಮುಡಿವಾಳಪ್ಪನವರು ಒಳಗೆ ಇದ್ದರು. ಸಾಧುಗಳು ತಮ್ಮ ಪರಿವಾರದೊಡನೆ ಹೊರಗೆ ನಿಂತುಕೊಂಡು ಮುಡಿವಾಳಪ್ಪನವರ ಶಿಷ್ಯರಲ್ಲಿ ಒಬ್ಬನನ್ನು ಕರೆದು—"ಅಗಡಿಯಿಂದ ಈ ಘಟವು ದರ್ಶನಕ್ಕಾಗಿ ಬಂದಿರುವದು; ಈ ಸಂಗತಿಯನ್ನು ನಿಮ್ಮ ಗುರುಗಳಿಗೆ ತಿಳಿಸಿರಿ" ಎಂದು ಹೇಳಿದರು. ಶಿಷ್ಯನು ಒಳಗೆ ಹೋಗಿ ಮುಡಿವಾಳಪ್ಪನವರ ಮುಂದೆ ಅಗಡಿಯ ಸಾಧುಗಳು ದರ್ಶನಕ್ಕಾಗಿ ಬಂದಿರುವರು; ಎಂದು ಹೇಳಿದನು. ಅದನ್ನು ಕೇಳಿ ಮುಡಿವಾಳಪ್ಪನವರು ಪರಮಾನಂದಬಟ್ಟು ಆಕಾಶದ ಕಡೆಗೆ ನೋರೆಯನ್ನೆತ್ತಿ—"ಅಪ್ಪಾ ಬಂದನೇನು-ಅಪ್ಪಾ ಬಂದಿರುವನೇ? ಅಪ್ಪನ ಭೆಟ್ಟಿಯು ಬಹಳ ದಿವಸಕ್ಕೆ ಆಯಿತು" ಎಂದು ಕಂಠೋಕ್ತವಾಗಿ ತಮ್ಮ ಷ್ಟಕ್ಕೆ ತಾವೇ ಅಂದುಕೊಂಡು, ಬಳಿಕ ಕ್ಷಣಹೊತ್ತು ಸುಮ್ಮನಾಗಿ ಆ ಮೇಲೆ ಶಿಷ್ಯನನ್ನು ಕುರಿತು—"ಇಲ್ಲಿಗೇಕೆ ಬಂದಿರುವನು? ಇಲ್ಲೇನಿದೆ? ಊರಲ್ಲಿ ಹೋಗೆನ್ನು" ಎಂದು ನುಡಿದರು. ಶಿಷ್ಯನು ಹೊರಗೆ ಬಂದು ಅದರಂತೆ ಸಾಧುಗಳಿಗೆ ತಿಳಿಸಿದನು. ಸಾಧುಗಳು ಸಂಭ್ರಮಪಟ್ಟು ದೊಡ್ಡವರ ಆಶೀರ್ವಚನವು ಸಿಕ್ಕಿತು. ಲಕ್ಷ್ಮೀವೇಂಕಟೇಶನ ಸೇವೆಗೆಂದು ಹೊರಟು ಇಲ್ಲಿಗೆ ಬಂದಿರುವ ಈ ದೇಹಕ್ಕೆ ಈ ಊರಲ್ಲಿ ಸೇವೆಗಾಗಿ ಅಪ್ಪಣೆ ಸಿಕ್ಕಂತಾಯಿತು. ಇನ್ನೇತಕ್ಕೆ ತಡವು? ಎಂದು ನುಡಿದು, ಮಹಾದ್ವಾರಕ್ಕೆ ಹಣೆ ಹಚ್ಚಿ ನಮಸ್ಕಾರ ಮಾಡಿ ಸಾಧುಗಳು ಅಲ್ಲಿಂದ ಹೊರಟರು. ಪ್ರಿಯವಾಚಕರೇ ನೋಡಿದಿರಾ! ಅಗಡಿಯ ಸಾಧುಗಳ ಹಾಗು ಮುಡಿವಾಳಪ್ಪನವರ ಭೆಟ್ಟಿಯ ಚಮತ್ಕಾರವನ್ನು! ಅವರಾವರ ಯಾವ ಸಂಬಂಧವೋ ಅವರದು ಅವರಿಗೇ ಗೊತ್ತು! ನಮಗಂತೂ ಅದೊಂದು ಚಮತ್ಕಾರವೇ ಆಗಿ ತೋರುವದು. ಸಾಧುಗಳು ಗರಗ ಗ್ರಾಮದಲ್ಲಿ ಸೇವೆಯನ್ನು ಮಾಡಲು ಅಲ್ಲಿ ಲಕ್ಷ್ಮೀಪತಿಯ ಗುಡಿಯಸಲುವಾಗಿ ಬಹುದ್ರವ್ಯವು ಭಿಕ್ಷೆಯ ರೂಪದಿಂದ ಸಿಕ್ಕಿತಂತೆ! ಮುಡಿವಾಳಪ್ಪನವರ ಹಾಗು ತಮ್ಮ ಭೆಟ್ಟಿಯ ಈ ಚಮತ್ಕಾರಿಕ ಆಖ್ಯಾನವನ್ನು ಶ್ರೀ ಶೇಷಾಚಲ ಸದ್ಗುರುಗಳವರು ತಮ್ಮ ಭಕ್ತಮಂಡಲಿಯ ಮುಂದೆ ಮೇಲಿಂದ ಮೇಲೆ ಹೇಳುತ್ತಿದ್ದರು.

ಹೀಗೆ ಹಲವು ಜನ ಸತ್ಪುರುಷರಿಗೆ ವಂದನೀಯರಾದ ನಮ್ಮ ಮುಡಿವಾಳಪ್ಪನವರ ಯೋಗ್ಯತೆಯನ್ನು ಪಾಮರನಾದ ನನ್ನಿಂದ ವರ್ಣಿಸುವದಾಗಬಹುದೇ? ಆ ಮಹಾತ್ಮರ ದಿವ್ಯ ಚರಿತ್ರವು ಯಾರಿಗೂ ತಿಳಿಯದು! ಸತ್ಪುರುಷರ ಆಚರಣೆಯ ರಹಸ್ಯವು ಸತ್ಪುರುಷರಿಗೆ ತಿಳಿಯುವದಲ್ಲದೆ "ಗುಣೀಗುಣಂವೇತ್ತಿ ನವೇತ್ತಿ ನಿರ್ಗುಣಂ" ಎಂಬಂತೆ ಸತ್ಪುರುಷರಲ್ಲದವರಿಗೆ ತಿಳಿಯಲಾರದು. ಶ್ರೀ ನಾಗಲಿಂಗಪ್ಪನವರ ಹಾಗೂ ಶ್ರೀ ಶೀಪಾಚಲ ಸಾಧುಗಳವರ ಆಗಮನವಾದ ಕಾಲದಲ್ಲಿ ಮುಡಿವಾಳಪ್ಪನವರ ಬಹಿರ್ವೃತ್ತಿಯನ್ನು ನೋಡುವ ನಮಗೆ ಅವರ ಅಂತರ್‌ವೃತ್ತಿಯ ಪರಿಚಯವು ಆಗಬಹುದೇ? ಶೀಪಾಚಲ ಸಾಧುಗಳು ಬಂದಿರುವರೆಂಬದನ್ನು ಕೇಳಿ, ಅಪ್ಪ ಬಂದನೇನು? ಬಹಳ ದಿವಸಕ್ಕೆ ಭೆಟ್ಟಿಯಾಯಿತು; ಇಲ್ಲಿ ಏನಿದೆ? ಊರೊಳಗೆ ಹೋಗನ್ನು, ಎಂದು ನುಡಿದದ್ದರ ರಹಸ್ಯವು ಏನಿರುವದೋ ಏನೋ ಅದು ಮುಡಿವಾಳಪ್ಪನವರಿಗೂ, ಶೀಪಾಚಲ ಸಾಧುಗಳಿಗೂ, ಗೊತ್ತಲ್ಲದೆ, ನಮ್ಮಂಥ ಕ್ಷುದ್ರರಿಗೆ ತಿಳಿಯುವದೆಂತು? ಏನೇ ಇರಲಿ; ಮುಡಿವಾಳಪ್ಪನವರು ಸಜ್ಜನರ ಕೋಟಿಯಲ್ಲಿ ಪ್ರಾಮುಖ್ಯತ್ವೇನ ಎಣಿಸಲ್ಪಡುತ್ತಿದ್ದದರಿಂದ ಸತ್ಪುರುಷರು ಅವರ ಸಮಾಗಮವನ್ನು ಬಯಸಿ ಒರುತ್ತಿರುವದು ನಿರ್ವಿವಾದವಾಗಿತ್ತು!

ಹದಿನೈದನೆಯ ಪ್ರಕರಣ.

## ನಿರ್ಯಾಣ.




ಕಹಿತಾರ್ಥವಾಗಿ ಮನುಷ್ಯರೂಪವನ್ನು ಧಾರಣಮಾಡಿದ ಮುಡಿವಾಳಪ್ಪನವರಿಗೆ ಹಲವು ಲೀಲೆಗಳಿಂದ ಭಕ್ತರನ್ನು ಸಂರಕ್ಷಿಸುವ ಪ್ರಸಂಗಗಳು ಇಂದಿನ ವರೆಗೆ ಅಸಂಖ್ಯವಾಗಿ ಬಂದು ಹೋದವು. ಅವರ ಮಾನುಷ ದೇಹವು ಜರ್ಜರವಾಗತೊಡಗಿತು; ಹೀಗಿರಲು ಕರಿಗೌಡನೆಂಬೊಬ್ಬ ಶಿಷ್ಯೋತ್ತಮನು ಮುದೇನೂರಿಂದ ಮುಡಿವಾಳಪ್ಪನವರ ದರ್ಶನಕ್ಕೆ ಬಂದನು. ಆತನು ಒಳ್ಳೇ ಗುರುಭಕ್ತನಾದ್ದರಿಂದ ಮುಡಿವಾಳಪ್ಪನವರ ಚರಣಗಳಿಗೆ ಪೊಡಮಟ್ಟು ತಾಳಲಯಗಳೊಂದಿಗೆ ಸುಸ್ವರವಾಗಿ ಕನ್ನಡ ಪದಗಳನ್ನು ಅನ್ನತೊಡಗಿದನು. ಕನ್ನಡ ಪದಗಳೆಂದರೆ ಬಹುತರವಾಗಿ ಮುಡಿವಾಳಪ್ಪನವರು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಆದ್ದರಿಂದ ಅವರು ಕರಿಗೌಡನಿಗೆ ಕರಿಗೌಡಾ, ಸಾಕು

ಬಿಡು ನಿನ್ನ ಹಾಳುರಗಳೆಯನ್ನು! ಆ ಪದಗಳಲ್ಲಿ ಏನದೆ? ಎಂದು ನುಡಿದರು. ಆದರೆ ಕರಿಗೌಡನು ಕನ್ನಡದ ಅಭಿಮಾನಿಯೂ ಆ ಭಾಷೆಯಲ್ಲಿ ಚನ್ನಾಗಿ ವ್ಯಾಸಂಗ ಮಾಡಿದವನೂ ಆದದ್ದರಿಂದ ಅವನು ಸುಮ್ಮನಾಗದೆ—"ಅಪ್ಪಾ ಕನ್ನಡನುಡಿಯು ಬಲು ಮಧುರವಿರುವದು; ನಿಜಗುಣೆಪ್ಪನವರು ವೇದಾಂತವಿಷಯದ ಮೇಲೆ ಬಹು ಸರಸವಾಗಿ ಪದಗಳನ್ನು ಮಾಡಿರುವರು; ಅಂದು ತೋರಿಸಲಾ! ಎಂದು ಕೇಳಿಕೊಂಡನು. ಕರಿಗೌಡನ ಆತುರತೆಯನ್ನು ನೋಡಿ ಮಡಿವಾಳಪ್ಪನವರು ಅವನಿಗೆ ಪದಗಳನ್ನು ಅನ್ನಲಿಕ್ಕೆ ಅಪ್ಪಣೆಯನ್ನು ಕೊಟ್ಟರು. ಬಳಿಕ ಕರಿಗೌಡನು ಬಹು ಆನಂದದಿಂದ ನಿಜಗುಣೆಪ್ಪನವರು ಮಾಡಿದ 'ಪರಮಾನುಬೋಧ' ವೆಂಬ ಗ್ರಂಥದೊಳಗಿನ ಪದ್ಯಗಳನ್ನು ಅನ್ನತೊಡಗಿದನು. ಸುಮನೋಹರವಾಗಿಯೂ, ನೀಚೋಚ್ಚಸ್ವರಬದ್ಧವಾಗಿಯೂ ಅನ್ನುವ ಆ ಪದ್ಯಗಳನ್ನು ಕೇಳಿ ಕೇಳಿದಂತೆ ಮಡಿವಾಳಪ್ಪನವರಿಗೆ ಆನಂದವು ಹೆಚ್ಚತೊಡಗಿತು. ಅವರು ಆನಂದದ ಭರದಲ್ಲಿ, ಕುಳಿತ ಆಸನವನ್ನು ಬಿಟ್ಟು ಎದ್ದು ನಿಂತು ತಾಳಗತ್ತಿನಲ್ಲಿ ಕುಣಿಯ ತೊಡಗಿದರು; ಆಗ ಅವರ ಕಣ್ಣುಗಳೊಳಗಿಂದ ಆನಂದಾಶ್ರುಗಳು ಧಾರೆಗಟ್ಟಿ ಸುರಿಯುತ್ತಿದ್ದವು. ಪರಮಾನುಬೋಧದೊಳಗಿನ ಎಲ್ಲ ಪದಗಳು ಮುಗಿಯುವವರೆಗೆ ಮಡಿವಾಳಪ್ಪನವರು ಕುಣಿಯುತ್ತಲೇ ಇದ್ದರು. ಪದಗಳು ಮುಗಿದವು; ಕರಿಗೌಡನು ತಂಬೂರಿಯ ಸುನಾದ ನಿಲ್ಲಿಸಿದನು ಆಗ ಶಿಷ್ಯರು ಮಡಿವಾಳಪ್ಪನವರ ಮೈಯನ್ನೂ ಕಣ್ಣುಗಳನ್ನೂ ಒರೆಸಿದರು. ಬಳಿಕ ಮಡಿವಾಳಪ್ಪನವರು, ಆಸನದ ಮೇಲೆ ಕುಳಿತು—ಕರಿಗೌಡಾ, ನಿನ್ನ ಪದಗಳು ಮಡಿವಾಳನನ್ನು ಕುಣಿಸಿಬಿಟ್ಟವು ನೋಡು! ಇಂದಿನ ವರೆಗೆ ನಾನು ಕನ್ನಡದಲ್ಲಿ ಏನಿದೆಯೆಂದು ತಿರಸ್ಕಾರಮಾಡುತ್ತಿದ್ದೆನು; ಭಲೆ ನಿಜಗುಣೆಪ್ಪಾ ನಿನ್ನ ಕವಿತ್ವಶಕ್ತಿಯು ಹೆಚ್ಚಿನದು! ಕನ್ನಡದಲ್ಲಿಯೂ ರಸಿಕರು ಇರುವರು!! ಯಾಜ್ಞವಲ್ಕ್ಯರು ತಮ್ಮ ಚಿಕ್ಕ ಹೆಂಡತಿಯಾದ ಮೈತ್ರೇಯಿಗೆ ಜ್ಞಾನೋಪದೇಶ ಮಾಡಿದ್ದನ್ನೇ ಸಾರರೂಪವಾಗಿ ನಿಜಗುಣೆಪ್ಪನು ಕನ್ನಡದಲ್ಲಿ ಮಾಡಿರುವನಲ್ಲಾ ಶಾಬಾಸ, ಶಾಬಾಸ, ಕರಿಗೌಡಾ, ಸಂಸ್ಕೃತ ಓದುವ ಕಾರಣವಿಲ್ಲ ನೋಡು, ನಿಜಗುಣೆಪ್ಪನು ಮೋಕ್ಷಮಾರ್ಗಕ್ಕೆ ಬಹು ಸುಲಭ ಮಾಡಿ ಕೊಟ್ಟಿರುವನು; ಇದರಿಂದ ಕನ್ನಡಿಗರಿಗೂ ಜ್ಞಾನವಾಗುವದು! ಎಂಬ ಉದ್ಗಾರಗಳನ್ನು ತೆಗೆದರು. ಅಂದಿನಿಂದ ಮಡಿವಾಳಪ್ಪನವರಿಗೆ ಕನ್ನಡಗ್ರಂಥಗಳ ಅಭಿರುಚಿಯು ಹತ್ತಿ ಅವರು ಕರಿಗೌಡನಿಂದ ಹಲವುಬಗೆಯ ಪದ್ಯಗಳನ್ನು ಅನಿಸಿ ಕೇಳಹತ್ತಿದರು.

ಹೀಗೆ ಕರಿಗೌಡನು ಮಡಿವಾಳಪ್ಪನವಂಗೆ ಕನ್ನಡ ಪದ್ಯಗಳನ್ನು ಶ್ರವಣ ಮಾಡಿಸುತ್ತ ಇರುತ್ತಿರಲು, ಒಂದು ದಿನ ಮಡಿವಾಳಪ್ಪನವರು ಒಬ್ಬರೇ ಕುಳಿತಾಗ ಕರಿಗೌಡನು ಅವರಿಗೆ ಪೊಡಮಟ್ಟು—ಅಪ್ಪಾ, ಈ ಶಿಷ್ಯನ ಒಂದು ಪ್ರಾರ್ಥನೆಯನ್ನು ನಡಿಸಿಕೊಡಬೇಕು, ಅದು ಏನಂದರೆ—ನಮ್ಮೂರಲ್ಲಿಯೇ ಅಪ್ಪನ ಸಮಾಧಿಯಾಗಬೇಕು. ನನ್ನ ಮೇಲೆ ದಯವಿಟ್ಟು ನನಗೆ ವಚನಕೊಡು ಎಂದು ದುಂಬಾಲ ಬಿದ್ದನು. ಮಡಿವಾಳಪ್ಪನವರು ಕರಿಗೌಡನ ಬಯಕೆಯನ್ನು ತಿಳಿದು ನಕ್ಕು—ಕರಿಗೌಡಾ, ಈ ದೇಹವು ಎಲ್ಲಿ ಬೀಳುವದೆಂಬದನ್ನು ಈಗಲೇ ಹ್ಯಾಗೆ ಹೇಳಬೇಕು? ನಿನ್ನ ಮನಸ್ಸಿನಲ್ಲಿ ನಿಮ್ಮೂರಲ್ಲಿಯೇ ನನ್ನ ಸಮಾಧಿಯಾಗಬೇಕೆಂಬ ಇಚ್ಛೆ ಇದ್ದರೆ ಬೇಗನೆ ಊರಿಗೆ ಹೋಗು; ಸಮಾಧಿಯನ್ನು ಸಿದ್ಧಪಡಿಸಿ ನನಗೆ ತಿಳಿಸು, ಮುಂದೆ ನೋಡೋಣವಂತೆ! ತಿಳಿಯಿತೇ? ಎಂದು ಹೇಳಿದರು. ಕರಿಗೌಡನು ಹರುಷಗೊಂಡು ಊರಿಗೆ ಹೋಗಿ ಸಮಾಧಿಯನ್ನು ಸಿದ್ಧಪಡಿಸಿ, ಮಡಿವಾಳಪ್ಪನವರಿಗೆ ಸುದ್ದೀ ತಿಳಿಸಲು ಒಂದು ಆಳು ಕಳುಹಿಸಿ, ಪತ್ರದಲ್ಲಿ ಮಡಿವಾಳಪ್ಪನವರಿಗೆ ಹೊರಟು ಬರಲಿಕ್ಕೆ ಸೂಚಿಸಿದ್ದನು. ಆ ಆಳುಮನುಷ್ಯನು ಒತ್ತರದಿಂದ ಗರಗಕ್ಕೆ ಪ್ರಯಾಣ ಬೆಳೆಸಿದನು.

ಮರುದಿನ ಕರಿಗೌಡನಿಗೆ ವಿಚಾರ ಹುಟ್ಟಿ ಮಡಿವಾಳಪ್ಪನವರನ್ನು ಕರೆಯಲಿಕ್ಕೆ ಆಳನ್ನು ಕಳುಹಿಸಿದ್ದು ತಪ್ಪಾಯಿತೆಂಬದು ತಿಳಿಯಿತು. ಆಗ ಅವನಿಗೆ ಪಶ್ಚಾತ್ತಾಪವಾಗಿ ಅವನು ತಾನೇ ಹೊರಟನು. ಆದರೆ ಅವನ ಆಳು ಮುಂಗಡವಾಗಿ ಹೊರಟದ್ದರಿಂದ ಅವನು ಒಂದು ದಿನ ಮುಂಚಿತವಾಗಿಯೇ ಬಂದು ಮಡಿವಾಳಪ್ಪನವರಿಗೆ ಪತ್ರವನ್ನು ಕೊಟ್ಟನು. ಆ ಪತ್ರವನ್ನು ಓದಿಸಿ ಕೇಳಿ ಮಡಿವಾಳಪ್ಪನವರು—"ಕಡೆಗೆ ಒಕ್ಕಲಿಗ್ಯಾ ಒಕ್ಕಲಿಗನೇ ಆದನು!" ಎಂದು ನುಡಿದರು, ಮರುದಿನ ಕರಿಗೌಡನೇ ಬರತಕ್ಕವನಿದ್ದದರಿಂದ ಆ ದಿವಸ ಅವನ ಮನುಷ್ಯನಿಗೆ ಏನೂ ಉತ್ತರ ಕೊಡಲಿಲ್ಲ. ಆ ಆಳು ಕರಿಗೌಡನು ಬರುವದಿಲ್ಲೆಂದು ಹೇಳಿದರೂ ಮಡಿವಾಳಪ್ಪನವರು ಕೇಳದೆ ಸುಮ್ಮನಿರು ನಾಳೆಗೆ ಬರುವನು; ಎಂದು ಹೇಳಿ ಅವನನ್ನು ಸಮಾಧಾನ ಪಡಿಸಿದರು.

ಮಡಿವಾಳಪ್ಪನವರ ಭವಿಷ್ಯದಂತೆ ಮರುದಿನ ಕರಿಗೌಡನು ಬಂದನು. ಆತನು ಲಗಬಗೆಯಿಂದ ಸ್ವಾಮಿಗಳಿಗೆ ಭೆಟ್ಟಿಯಾಗಿ ಆಳನ್ನು ಕಳಿಸಿದ್ದಕ್ಕೆ ಕ್ಷಮಿಸಬೇಕೆಂದು ಬೇಡಿಕೊಂಡನು. ಆಗ ಮಡಿವಾಳಪ್ಪನವರು—"ಕರಿಗೌಡಾ, ನಿನ್ನ ಪ್ರಯತ್ನವೆಲ್ಲ ವ್ಯರ್ಥವಾಯಿತು. ನೀನು ಬುದ್ಧಿಗೇಡಿಯಾಗಿ ಕೊಂಡೆ; ನೀನು ಎಷ್ಟು

ಜಾಣನಿದ್ದರೂ ಕಡೆಗೆ ಶುದ್ಧ ಒಕ್ಕಲಿಗನಾದೆ. ಇನ್ನು ನಿಮ್ಮೂರಿಗೆ ನಾನು ಬರುವದಿಲ್ಲ'' ಎಂದು ನುಡಿದರು. ಕರಿಗೌಡನು ಅನುತಾಪಪಟ್ಟು—''ಅಪ್ಪಾ, ಇನ್ನು ಹ್ಯಾಗೆ ಮಾಡಬೇಕು? ಸಮಾಧಿಯಂತೂ ಸಿದ್ಧವಾಗಿದೆ. ನನ್ನ ಅಪರಾಧವನ್ನು ಕ್ಷಮಿಸಿ ನನ್ನ ಇಚ್ಛೆಯನ್ನು ಪೂರ್ಣ ಮಾಡಬೇಕು ಎಂದು ಬೇಡಿಕೊಂಡನು. ಅದನ್ನು ಕೇಳಿ ಮಡಿವಾಳಪ್ಪನವರು—ತಮ್ಮಾ ಕರಿಗೌಡಾ ಇನ್ನು ಆ ಮಾತು ಆಡಬೇಡ; ಇಕೋ ಈ ಟೆಂಗಿನಕಾಯಿಯನ್ನು, ಇದೇ ಮಡಿವಾಳಪ್ಪನ ಕಾಯವೆಂದು ತಿಳಿದು ಇದನ್ನು ಸಮಾಧಿಯಲ್ಲಿಟ್ಟು ನಿನ್ನ ಇಚ್ಛೆಯನ್ನು ಪೂರ್ಣ ಪಡಿಸಿಕೋ ಎಂದು ಹೇಳಿದರು. ಕರಿಗೌಡನು ಉಪಾಯಗಾಣದೆ ಆ ಟೆಂಗಿನಕಾಯಿಯನ್ನು ತಕ್ಕೊಂಡು ಹೊರಟು ಹೋದನು.

ಮುಂದೆ ಒಂದು ದಿನ ಮಡಿವಾಳಪ್ಪನವರು ಗರಗದ ಗೌಡರ ಮನೆತನದವನೂ ತಮ್ಮ ಪ್ರಿಯಭಕ್ತನೂ ಆದ ಬಿಷ್ಟನಗೌಡನೆಂಬವನನ್ನು ಹತ್ತಿರ ಕರೆದು ''ಬಿಷ್ಟನಗೌಡಾ, ಹತ್ತುವರ್ಷಗಳು ಎಂದಿಗೆ ತುಂಬುವವು? ಎಂದು ಕೇಳಿದರು. ಬಿಷ್ಟನಗೌಡನಿಗೆ ಸ್ಮರಣವಾಗದ್ದರಿಂದ ಮಡಿವಾಳಪ್ಪನವರು ತಾವೇ ಹೇಳಿ, ಮನೆಯಲ್ಲಿ ಏನಾದರೂ ಟಿಪ್ಪಣೆಯನ್ನು ಬರೆದು ಇಟ್ಟಿರುವಿಯೋ ಎಂದು ಕೇಳಿದರು. ಬಿಷ್ಟನಗೌಡನು ಮನೆಗೆ ಬಂದು ಟಿಪ್ಪಣವನ್ನು ಹುಡುಕಿ ನೋಡಿದನು. ಮಡಿವಾಳಪ್ಪನವರು ಹೇಳಿದ ಮಿತಿಗೆ ಹತ್ತುವರುಷಗಳು ತುಂಬುತ್ತಿದ್ದವು. ಆಗ ಬಿಷ್ಟನಗೌಡನು ಮಡಿವಾಳಪ್ಪನವರ ಕಡೆಗೆ ಹೋಗಿ—ಅಪ್ಪಾ, ನೀವು ಹೇಳಿದ್ದು ನಿಜವೆಂದು ನುಡಿದನು.

ಹಿಂದಕ್ಕೊಮ್ಮೆ ಮಡಿವಾಳಪ್ಪನವರು ದೇಹ ಬಿಡುತ್ತೇವೆಂದು ನುಡಿದಾಗ ಬಿಷ್ಟನಗೌಡನು—''ಅಪ್ಪಾ, ಈಗಲೇದೇಹಬಿಡಬೇಡ'' ಎಂದು ಬೇಡಿಕೊಂಡನು. ಆಗ ಅದಕ್ಕೆ ಮಡಿವಾಳಪ್ಪನವರು--ಹಾಗಾದರೆ ಬಿಷ್ಟನಗೌಡಾ, ನಿನ್ನ ಮನಸ್ಸಿನಲ್ಲಿ ನಾನು ಎಷ್ಟು ದಿವಸ ಬದುಕಿ ಇರಬೇಕೆಂದು ಇಚ್ಛೆಯದೆ ಹೇಳಿ ಬಿಡು; ಒಮ್ಮೆ ನಿಮ್ಮ ಆಶೆಯಾದರೂ ತೀರಿ ಹೋಗಲಿ! ಎಂದರು; ಸ್ವಾಮಿಗಳ ಈ ಮಾತು ಕೇಳಿ ಬಿಷ್ಟನಗೌಡನು—ಅಪ್ಪಾ, ಹತ್ತುವರ್ಷ ಇದ್ದರೆ ಸಾಕು ಎಂದು ಅಂದನು. ಆಗ್ಗೆ ಮಡಿವಾಳಪ್ಪನವರು ಅದಕ್ಕೆ ಒಪ್ಪಿಕೊಂಡು ಮುಂದೆಮಾತ್ರ ''ಇನ್ನೂ ಇರಬೇಕು'' ಎಂಬದನ್ನು ನುಡಿಯಬಾರದು ಎಂದು ಕರಾರು ಮಾಡಿ ಬಿಷ್ಟನಗೌಡನ ಕಡೆಯಿಂದ ಅಂದಿನ ಮಿತಿಯನ್ನು ಬರೆಯಿಸಿ ಇಟ್ಟರು. ಈ ಸಂಗತಿಯನ್ನೇ ಕುರಿತು ಮಡಿವಾಳಪ್ಪನವರು ಮೇಲೆ ಹೇಳಿದಂತೆ ಬಿಷ್ಟನಗೌಡನನ್ನು ಕೇಳಿದರು.

ಮಡಿವಾಳಪ್ಪನವರು ಬಿಷ್ಟನಗೌಡನನ್ನು ಕೇಳಿದಾಗ ಹತ್ತು ವರುಷಗಳು ತುಂಬಲಿಕ್ಕೆ ಇನ್ನು ಏಳು ದಿವಸಗಳ ಅವಕಾಶವಿತ್ತು; ಎಂಟನೆಯ ದಿವಸ ನಾನು ದೇಹ ಬಿಡುತ್ತೇನೆಂದು ಮಡಿವಾಳಪ್ಪನವರು ಬಿಷ್ಟನಗೌಡನಿಗೆ ಹೇಳಿದರು. ಬಿಷ್ಟನಗೌಡನು ಮೊದಲೇ ವಚನಕೊಟ್ಟಿದ್ದರಿಂದ ನಿರುಪಾಯನಾಗಿ ಸುಮ್ಮನಾದನು. ಆಗ ಮಡಿವಾಳಪ್ಪನವರು ತಮ್ಮ ಪ್ರೀತಿಯ ಭಕ್ತರಿಗೆ ಅದರಂತೆ ಪತ್ರಗಳನ್ನು ಬರೆಯಿಸಿದರು. ಚಾರರು ಮಡಿವಾಳಪ್ಪನವರ ನಿರ್ಯಾಣವನ್ನು ತಿಳಿಸುವದಕ್ಕೆ ನಾಲ್ಕೂಕಡೆಗೆ ಧಾವಿಸಿದರು. ಸದ್ಭಕ್ತರು ತಮ್ಮ ಗುರುವಿನ ಸಮಾಧಿಕಾಲವನ್ನು ಅರಿತು ಗರಗಕ್ಕೆ ಬಂದರು. ನಾಲ್ಕಾರು ದಿವಸಗಳಲ್ಲಿ ಗರಗದಲ್ಲಿ ದೊಡ್ಡ ಜಾತ್ರೆಯು ನೆರೆದಂತಾಯಿತು. ಜನಸಂದಣಿಯು ಹೆಚ್ಚಿತು. ವಿಕ್ರಮ ಸಂವತ್ಸರದ ಮಾಘಶುದ್ಧ ತದಿಗೆಯ ಪುಣ್ಯಯೋಗವು ಪ್ರಾಪ್ತವಾಯಿತು. ಮಡಿವಾಳಪ್ಪನವರಿಗೆ ಬೇನೆಯಿಲ್ಲ; ಬೇಸರಿಕೆಯಿಲ್ಲ. ಇಂಥವರು ಹೇಗೆ ಸಾಯುವರೆಂದು ಕೆಲಜನರು ಅಂದುಕೊಳ್ಳ ಹತ್ತಿದರು. ಪಾಪ! ಆ ಜನರಿಗೆ ಮಡಿವಾಳಪ್ಪನವರು ಇಚ್ಛಾಮರಣಿಗಳೆಂಬದು ಹ್ಯಾಗೆ ಗೊತ್ತಾಗಬೇಕು?

ಆ ದಿವಸ ಮಡಿವಾಳಪ್ಪನವರು ಎಲ್ಲ ಭಕ್ತರನ್ನೂ ತಮ್ಮ ಹತ್ತರ ಕರೆದು— ಅಪ್ಪಗಳಿರಾ, ಇಂದಿಗೆ ಈ ಮಡಿವಾಳನ ಜಡಶರೀರವು ಮರೆಯಾಯಿತೆಂದು ತಿಳಿಯಿರಿ. ಆದರೂ ಆತ್ಮಜ್ಯೋತಿಯು ಅವಿನಾಶಿಯೆಂಬದನ್ನು ಮರೆಯಬಾರದು. ಸದ್ಧರ್ಮವನ್ನು ಮರೆಯಬೇಡಿರಿ. ಪರಶಿವನ ಸ್ಮರಣೆಗೆ ತಪ್ಪಬೇಡಿರಿ. ಧರ್ಮವಂತರನ್ನು ಶಿವನು ಸಂರಕ್ಷಿಸುವನು; ಎಂದು ನುಡಿದು, ಎಲ್ಲ ಭಕ್ತರಿಗೂ ಕಾಯಿ-ಉತ್ತತ್ತಿ ಮೊದಲಾದ ಫಲಗಳನ್ನು ಪ್ರಸಾದರೂಪದಿಂದ ಕೊಟ್ಟರು. ಎಲ್ಲ ಭಕ್ತಪರಿವಾರದ ಸಂಗಡ ಅಮೃತತುಲ್ಯವಾದ ಅಂಬಲಿಯನ್ನು ಉಂಡರು; ಎಲ್ಲ ಭಕ್ತರೂ ಪಾರ್ವತೀಪತಿಯ ಭಜನೆಯನ್ನು ಮಾಡಹತ್ತಿದರು. ಹೊತ್ತು ಮುಣುಗಿತು, ಮಧ್ಯರಾತ್ರಿಯಾಯಿತು. ಭಜನೆಯ ದಿವ್ಯಘೋಷವು ದಿಕ್‌ತಟಗಳನ್ನು ತುಂಬುತ್ತಿತ್ತು; ಅಷ್ಟರಲ್ಲಿ ಮಡಿವಾಳಪ್ಪನವರು ಮೈತುಂಬ ವಿಭೂತಿಯನ್ನು ಧರಿಸಿಕೊಂಡು, ಗೋಮಯದಿಂದ ಸಾರಿಸಿ ಪವಿತ್ರವಾಗಮಾಡಿದ ನೆಲದ ಮೇಲೆ ಹಾಕಿದ ವಿಶಾಲವಾದ ಕಟ್ಟಿಗೆಯ ಮಣೆಯ ಮೇಲೆ ಬಂದು ಕುಳಿತರು. ಭಕ್ತಪರಿವಾರವು ವಿಯೋಗದುಃಖಾಕುಲವಾಗಿ ಕೌತುಕದಿಂದ ನೋಡುತ್ತ ಸುತ್ತಲೂ ನಿಂತುಕೊಂಡಿತು. ಆಗ ಮಡಿವಾಳಪ್ಪನವರ ಭವ್ಯವೂ, ತೇಜೋಮಯವೂ ಆದ ಪದ್ಮಾಸನಸ್ಥ ಸುಂದರಮೂರ್ತಿಯನ್ನು ಕಣ್ಣುತುಂಬಾ ನೋಡಿ ಎಲ್ಲ

ರಿಗೂ ಪರಮಾನಂದವಾಯಿತು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಮುಡಿವಾಳಪ್ಪನವರು ಕಣ್ಣು ತೆರೆದು ಎಲ್ಲ ಭಕ್ತವೃಂದವನ್ನು ನೋಡಿ—ಅವರಿದ್ದಾರೆಯೇ, ಇವರಿದ್ದಾರೆಯೇ ಎಂದು ಹೆಸರುಗೊಂಡು ಕೇಳತೊಡಗಿದರು. ಎಲ್ಲರ ಹೆಸರನ್ನು ಕೇಳುವದಾಯಿತು. ಬಳಿಕ ಮುಡಿವಾಳಪ್ಪನವರು—ಸವದತ್ತಿಯ ಮಹಾರುದ್ರನು ಬಂದಿರುವನೇನು ಎಂದು ಕೇಳಿದರು. ಮಹಾರುದ್ರನು ಯಾಕೋ ಬಂದಿಲ್ಲವೆಂದು ಭಕ್ತರು ಹೇಳಿದರು. ಅದನ್ನು ಕೇಳಿ ಮುಡಿವಾಳಪ್ಪನವರು-ಪತ್ರಾರ ಮಹಾರುದ್ರನಿಗೆ ಪತ್ರವು ಮುಟ್ಟಿರುವದಿಲ್ಲ. ಆತನು ನೆರೆವೂರಿಗೆ ಹೋಗಿರುವನಾದ್ದರಿಂದ ನಮ್ಮ ನಿರ್ಯಾಣ ಸಮಯಕ್ಕೆ ಒದಗಲು ಅವನಿಗೆ ಸುದ್ದಿಯೇ ಹತ್ತಿರುವದಿಲ್ಲ; ಪಾಪ! ಆ ಭಕ್ತನು ಇಂದು ಬರಬೇಕಾಗಿತ್ತು.'' ಎಂದು ನುಡಿದು ಕೂಡಿದ ಜನರನ್ನು ಕುರಿತು—ಏನಿರೋ, ಮಹಾರುದ್ರನು ನಾಳೆಗೆ ಬಂದಾನು; ಅವನು ಬರುವದರೊಳಗೆ ಈ ಜಡಶರೀರವನ್ನು ಸಮಾಧಿಯೊಳಗೆ ಹಾಕಿ ಮುಚ್ಚಿದ್ದರೆ. ಸಮಾಧಿಯನ್ನು ತೆಗೆದಾದರೂ ಈ ಜಡಶರೀರವನ್ನು ಆತನಿಗೆ ತೋರಿಸಬೇಕು. ಅವನೇನು ಬಡವನು; ಅವನ ಸಲುವಾಗಿ ಯಾರು ಪೇಚಾಡಬೇಕೆಂದು ಉದಾಸೀನ ಮಾಡಿ ಬಿಟ್ಟಿಗಿಟ್ಟೀರಿ; ಅವನು ನನ್ನ ಭಕ್ತನಿರುವನು, ಎಂದು ಹೇಳಿದರು. ಒಳಿಕ ಮುಡಿವಾಳಪ್ಪನವರು ಶಿವಸ್ತುತಿಯನ್ನು ಮಾಡತೊಡಗಿದರು. ಅಷ್ಟರಲ್ಲಿ ಅವರ ಪ್ರಾಣೋತ್ಕ್ರಮಣವಾಗ ತೊಡಗಿತು. ಆಗ ೩ ಗಂಟೆ ರಾತ್ರಿಯಾಗಿರಬಹುದು; ಸರ್ವರೂ ನೋಡುತ್ತಿರಲು, ಮುಡಿವಾಳಪ್ಪನವರು ಮೊದಲು ಗಣಪತಿಯ ನಾಮಸ್ಮರಣ ಮಾಡಿದರು. ತರುವಾಯ ಮಹಾಬಲೇಶ್ವರ, ಮಹಾಬಲೇಶ್ವರ, ಹರ ಹರ ಮಹಾದೇವ ಎಂದು ಗರ್ಜಿಸಲು ಅವರ ಶರೀರದೊಳಗಿನ ದಿವ್ಯಜ್ಯೋತಿಯು ಹೊರಟು ಹೋಯಿತು! ಜಡಶರೀರವು ಸ್ತಬ್ಧವಾಗಿ ಕುಳಿತು ಬಿಟ್ಟಿತು!! ಹರ! ಹರ!! ಹರ!!!

ಪ್ರಿಯವಾಚಕರೇ, ಮುಂದೆ ನಮ್ಮ ಲೆಕ್ಕಣಿಕೆಯು ಚಲಿಸದಾಯಿತು! ಯಾವ ಮಹಾತ್ಮನ ಸುಮಂಗಲವಾದ ಚರಿತ್ರವು ಸರಸವಾಗಿ ನಮ್ಮ ಲೆಕ್ಕಣಿಕೆಯಲ್ಲಿ ಇಳಿಯಿತೋ, ಆ ಮಹಾತ್ಮನ ದಿವ್ಯಜ್ಯೋತಿಯು ಅಂತರ್ಧಾನವಾದ್ದರಿಂದ ಮುಂದಿನ ಸಂಗತಿಯನ್ನು ಬರೆಯುವದಕ್ಕೆ ನಮಗೂ ಸ್ವಲ್ಪ ಅಸಮಾಧಾನವಾಗಿರುವದು. ಆದರೆ ಹೇಳತಕ್ಕ ಸಂಗತಿಯನ್ನು ಹೇಳದಿದ್ದರೆ ನಿರ್ವಾಹವಿಲ್ಲದ್ದರಿಂದ ಆ ಮಹಾತ್ಮರ ಅವಿನಾಶಿಯಾದ ಆತ್ಮದ ಕಡೆಗೆ ಲಕ್ಷಗೊಟ್ಟು ನಮ್ಮ ಮನಸ್ಸನ್ನು ಪ್ರಸನ್ನೀಕರಿಸಿಕೊಂಡು, ಲೆಕ್ಕಣಿಕೆಗೆ ಹೊಸಹುರುಪನ್ನು ಕೊಟ್ಟು

ಪುನಃ ಬರೆಯ ತೊಡಗುವೆವು. ನೀವೂ ಆ ಮಹಾತ್ಮನ ವಿಯೋಗವನ್ನು ಸಹನೆ ಮಾಡಿಕೊಂಡು ಸಾವಧಾನಮನಸ್ಕರಾಗಿರಿ; ಇರಲಿ;

ಮಡಿವಾಳಪ್ಪನವರು ದೇಹಬಿಡುವ ಕಾಲಕ್ಕೆ ತಮ್ಮ ಜಡಶರೀರದ ಮೆರವಣಿಗೆಯನ್ನು ಮಾಡದೆ, ಸದ್ದಿಲ್ಲದೆ ಸಮಾಧಿಯಲ್ಲಿ ಹುಗಿದು ಬಿಡಬೇಕೆಂದು ಹೇಳಿದ್ದರೂ, ಕೂಡಿದ ಭಕ್ತಪರಿವಾರವು ತಮ್ಮ ಸಮಾಧಾನಕ್ಕಾಗಿ, ರಥವನ್ನು ಸಿದ್ಧಪಡಿಸಿತು; ಕದಳೀಸ್ತಂಭಗಳಿಂದಲೂ, ತಳಿರು ತೋರಣಗಳಿಂದಲೂ, ವಿವಿಧಬಣ್ಣಗಳ ಪತಾಕಿಗಳಿಂದಲೂ ಅಲಂಕೃತವಾಗಿ ಪರಿಶೋಭಿಸುವ ಆ ರಥದಲ್ಲಿ ಮಡಿವಾಳಪ್ಪನವರ ಜಡಶರೀರವನ್ನು (ಕಲೇವರ) ಕೂಡ್ರಿಸಿದರು. ಸನಾದಿ, ಕಹಳೆ, ನಗಾರಿಗಳ ನಿನಾದವು ಅಂಬರವನ್ನು ತುಂಬತೊಡಗಿತು. ಸಾವಿರಾರು ಜನರು ರಥದ ಎಡಬಲಗಳಲ್ಲಿ ಸಾಲು ಸಾಲಾಗಿ ನಡೆಯುತ್ತಿರಲು, ತೇರಿನ ಹಗ್ಗವನ್ನು ಹಿಡಿದ ಭಕ್ತರು ಆವೇಶಗೊಂಡು ಜಗ್ಗುತ್ತಿರಲು, ರಥವು ಗರಗಗ್ರಾಮದಲ್ಲಿ ಮೆರವಣಿಗೆಯನ್ನು ಹೊಂದಿ ಹಳ್ಳದ ದಂಡೆಗೆ ಮೊದಲೇ ಸಿದ್ಧಪಡಿಸಿಟ್ಟಿದ್ದ ಸಮಾಧಿಯ ಬಳಿಗೆ ಬಂದಿತು. ಮೆರವಣಿಗೆಯ ಕಾಲಕ್ಕೆ ರಥದ ಮೇಲೆ ಸೂರೆಮಾಡಲ್ಪಡುವ ಬೆಂಡು ಬತ್ತಾಸಗಳೂ ಭತ್ತದ ಅರಳುಗಳೂ ದೇವತೆಗಳ ಪುಷ್ಪವೃಷ್ಟಿಯನ್ನು ನೆನಪುಮಾಡಿಕೊಡುತ್ತಿದ್ದವು. ಬಳಿಕ ರಥದಿಂದ ಮಡಿವಾಳಪ್ಪನವರ ಜಡಶರೀರವು ಕೆಳಗಿಳಿಸಲ್ಪಟ್ಟು ಸರ್ವರೂ ನೋಡುತ್ತಿರಲು. ಅದನ್ನು ಸಮಾಧಿಯಲ್ಲಿ ಕೂಡ್ರಿಸಿ ಮೇಲೆ ಕಲ್ಲಿನ ಡಬಾಸನ್ನು ಮುಚ್ಚಿದರು! ಅಷ್ಟರಲ್ಲಿ 'ಅಪ್ಪಾ' 'ಅಪ್ಪಾ' ಎಂಬ ಶಬ್ದದೊಡನೆ ರೋದನಸ್ವರವು ದೂರದಿಂದ ಕೇಳಬರತೊಡಗಿತು; ಜನರು ರೋದನಸ್ವರವು ಕೇಳಬರುವತ್ತ ನೋಡುತ್ತಿರಲು, ಮಧ್ಯಮವಯಸ್ಸಿನ ಒಬ್ಬ ಗೃಹಸ್ಥನು ಮೈಮೇಲೆ ಸ್ಮೃತಿಯಿಲ್ಲದವನಂತೆ ಒಂದೇಸವನೆ ಓಡುತ್ತ ಬರುತ್ತಿದ್ದನು. ಅವನು ಲಗಬಗೆಯಿಂದ ಬಂದು ಮಡಿವಾಳಗುರುವಿನ ಜಡಶರೀರವನ್ನಾದರೂ ಕಾಣದೆ, ಸಮಾಧಿಯ ಮೇಲೆ ಹೊರಳಾಡಹತ್ತಿದನು.

ಪ್ರಿಯವಾಚಕರೇ, ಹೀಗೆ ಆಕಸ್ಮಾತ್ತಾಗಿ ಬಂದ ಈ ಗೃಹಸ್ಥನು ಯಾರೆಂಬದು ನಿಮಗೆ ತಿಳಿಯಿತೋ? ಮಡಿವಾಳಪ್ಪನವರು ದೇಹವನ್ನು ಬಿಡುವಕಾಲಕ್ಕೆ ನನ್ನ ಭಕ್ತನೊಬ್ಬನು ನಾಳೆ ಬರತಕ್ಕವನಿದ್ದಾನೆಂದು ಹೇಳಿದ್ದರಷ್ಟೇ; ಆ ಭಕ್ತನೇ ಇವನು; ಇವನೇ ಸವದತ್ತಿಯ ಮಹಾರುದ್ರಪ್ಪನು! ಈ ಮಹಾರುದ್ರಪ್ಪನು ಯಾವದೋ ಒಂದು ಕಾರ್ಯಾಂತರದಿಂದ ಪರವೂರಿಗೆ ಹೋಗಿರಲು ಸವದತ್ತಿಗೆ ಮಡಿವಾಳಪ್ಪನವರ ಪತ್ರವು ಹೋಯಿತು. ಆದರೆ ಆತನು ತಿರುಗಿ

ಊರಿಗೆ ಬರುವಷ್ಟರಲ್ಲಿ ಮುಡಿವಾಳಪ್ಪನವರ ಗೇಹಾವಸಾನ ಕಾಲವು ಮೀರಿ ಹೋಗಿತ್ತು. ಮಹಾರುದ್ರಪ್ಪನು ಮನೆಗೆ ಬಂದ ಬಳಿಕ ಪತ್ರವು ಅವನ ಕೈಗೆ ಸಿಕ್ಕಿತು. ಅವನು ಆ ಕೂಡಲೇ ಅಲ್ಲಿಂದ ಹೊರಟು ಮೇಲೆ ಹೇಳಿದಂತೆ ಮುಡಿವಾಳಪ್ಪನವರ ಸಮಾಧಿಯನ್ನು ಮುಚ್ಚುವದಾದಬಳಿಕ ಬಂದನು.

ಮಹಾರುದ್ರಪ್ಪನು ಸಮಾಧಿಯ ಮೇಲೆ ಹೊರಳಾಡುತ್ತಿರಲು ಕೂಡಿದ ಭಕ್ತರಿಗೆ ಮುಡಿವಾಳಪ್ಪನವರು ಹೇಳಿದ ಸಂಗತಿಯು ನೆನಪಾಗಿ, ಮಹಾರುದ್ರಪ್ಪನನ್ನು ಸಂತೈಸಿ, ಸಮಾಧಿಯ ಮೇಲಿನ ಡಬಾಸನ್ನು ತೆಗೆದರು ಆಗ ಒಳಗೆ ಎಡಬಲಗಳಲ್ಲಿ ಥಾಳಾಗಿ ಉರಿಯುತ್ತಿರುವ ದೀಪಜ್ಯೋತಿಯಲ್ಲಿ ಪದ್ಮಾಸನಸ್ಥವಾದ ಮುಡಿವಾಳಗುರುವಿನ ಶರೀರವು ವಿವಿಧಪುಷ್ಪಗಳಿಂದಲಂಕೃತವಾಗಿ ಒಪ್ಪುತ್ತಿತ್ತು ಆ ಮಹಾತ್ಮನ ಮುಖಕಮಲವು ಎಳ್ಳಷ್ಟಾದರೂ ಕಂದದೆ, ನಿಸ್ತೇಜವಾಗದೆ. ಹಾಗೇ ಪ್ರಸನ್ನಮಯವಾಗಿದ್ದದ್ದನ್ನು ಕಣ್ಣಾರೆ ಕಂಡು ಮಹಾರುದ್ರಪ್ಪನಿಗೆ ಪರಮಾನಂದವಾಯಿತು. ಆತನು ಮನದಣಿಯಾಗಿ ತನ್ನ ಗುರುವಿನ ಕಲೇವರವನ್ನು ನೋಡಿ ಬಳಿಕ ಸಮಾಧಿಯನ್ನು ಮುಚ್ಚಲು ಸಮಸ್ತರಿಗೂ ವಿಜ್ಞಾಪಿಸಿಕೊಂಡನು. ಮಹಾರುದ್ರಪ್ಪನು ಸಮಾಧಿಸ್ಥಗುರುವಿನ ರೂಪವನ್ನು ಹೃದಯದಲ್ಲಿಟ್ಟುಕೊಂಡು "ಮುಡಿವಾಳಗುರುವೇ ನಿನಗೆ ನಮಸ್ಕಾರವು!! ಎಂದು ಪುನಃಪುನಃ ಸಮಾಧಿಯನ್ನು ವಂದಿಸಿದನು. ಕೂಡಿದ ಎಲ್ಲ ಜನರೂ ಸಮಾಧಿಯನ್ನು ವಂದಿಸಿ, ಮುಡಿವಾಳಗುರುವಿನ ಅಗಾಧವಾದ ಕೃತಿಗಳನ್ನು ನೆನೆಯುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

---

ಹದಿನಾರನೆಯ ಪ್ರಕರಣ.

## ಉಪಸಂಹಾರ.

—(೩೦೩)—



ಪ್ರಿಯವಾಚಕರೇ, ಇಲ್ಲಿಗೆ ನಮ್ಮ ಪೂಜ್ಯ ಮುಡಿವಾಳಪ್ಪನವರ ಚರಿತ್ರವು ಮುಗಿಯಿತು; ಚರಿತ್ರವು ಮುಗಿಯಿತೆನ್ನುವದಕ್ಕಿಂತ ನಮಗೆ ಉಪಲಬ್ಧವಾಗಿರುವ ಸಂಗತಿಯು ಮುಗಿಯಿತೆಂದು ಬರೆಯುವದು ನಮಗೆ ಹೆಚ್ಚು ಸಮರ್ಪಕವಾಗಿ ತೋರುತ್ತದೆ. ಯಾಕಂದರೆ ಒಂದನೂರಾ ಐದು ವರ್ಷಗಳವರೆಗೆ ಭೂಲೋಕದಲ್ಲಿಬಾಳಿ, ಹಲವು ಲೀಲೆಗಳನ್ನು ತೋರಿಸಿದ ಆ ಮಹಾತ್ಮರ ಚರಿ

ತ್ರವು ಇಷ್ಟೇ ಎಂದು ಯಾರು ಹೇಳುವರು! ಅವರ ಚರಿತ್ರವು ಅನಂತವಿರುವದು. ಆದರೂ ಅವರ ಆಯುಷ್ಯ ಪ್ರಮಾಣದಲ್ಲಿ ಸಂಭವಿಸಿದ ಅತಿ ಮಹತ್ವದ ಸಂಗತಿಗಳನ್ನು ಇಲ್ಲಿ ಬರೆಯುವದಾಯಿತು. ಈ ಮಂಗಲಚರಿತ್ರವು ಅತ್ಯಂತ ಕಲ್ಯಾಣಪ್ರದವೆಂಬದರಲ್ಲಿ ಸಂದೇಹವಿಲ್ಲ.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಮಡಿವಾಳಪ್ಪನವರ ಸಮಾಧಿಯಾದ ಬಳಿಕ ಭಕ್ತಶ್ರೇಷ್ಠರೆಲ್ಲರೂ ಕೂಡಿ, ಅವರ ಸಮಾಧಿಯ ಮೇಲೆ ಒಂದು ಸುಂದರವಾದ ಗುಡಿಯನ್ನು ಕಟ್ಟಿಸಿದರು. ಆ ಗುಡಿಯು ಈಗ್ಯೂ ಭಾವಿಕರ ಹೃದಯಾನಂದಕರವಾಗಿ ಅಚ್ಚಳಿಯದೆ ಒಪ್ಪುತ್ತಲಿದೆ. ಗುಡಿಯು ಒಂದು ವಿಶಾಲವಾದ ಹೊಲದಲ್ಲಿರುವದರಿಂದಲೂ, ಅದರ ಸಮೀಪದಲ್ಲಿ ಮಡಿವಾಳತೀರ್ಥವೆನಿಸಲು ಯೋಗ್ಯವಾದ ಒಂದು ಚಿಕ್ಕ ಹಳ್ಳವು ಇರುವದರಿಂದಲೂ ಅದು ಬಹು ದರ್ಶನೀಯವಾಗಿರುವದು.

ಮಡಿವಾಳಪ್ಪನವರ ದೇಹವಿಸರ್ಜನವಾಗಿ ಇಂದಿಗೆ ಸರಾಸರಿ ೩೮ ವರ್ಷಗಳಾಗಬಹುದು. ಭಾವಿಕರಾದ ಗರಗವಾಸಿಗಳು ಅವರ ಜಾತ್ರೆಯನ್ನು ಪ್ರತಿವರುಷ ಮಾಘಮಾಸದಲ್ಲಿ ಮಾಡುತ್ತಿರುವರು. ಆಗ ಅನೇಕ ಜನ ಭಕ್ತಪರಿವಾರವು ಸಮಾಧಿಯ ದರ್ಶನಕ್ಕೆ ಬರುತ್ತಿರುವದು. ಜಾತ್ರೆಯ ಸಮಯದಲ್ಲಿ ಭಜನೆಯ ಸಪ್ತಾಹವು ಬಲುಹೃದಯಂಗಮವಾಗಿ ನಡಿಸಲ್ಪಡುವದು. ಹೀಗೆ ಮಹೋತ್ಸವವು ನಡೆದು ಮಾಘಶುದ್ಧ ತದಗಿಯ ದಿವಸ ಬಹುದೊಡ್ಡ ಪ್ರಸ್ತವಾಗಿ ಬಡಬಗ್ಗರೆಲ್ಲರೂ ಮಡಿವಾಳಗುರುವಿನ ಪ್ರಸಾದದಿಂದ ಸಂತುಷ್ಟರಾಗುವರು.

ನಮ್ಮ ಕರ್ನಾಟಕದಲ್ಲಿ ಇಂದಿನ ವರೆಗೆ ಹಲವು ಜನ ಸತ್ಪುರುಷರು ಆಗಿಹೋಗಿರುವರು. ಅವರೆಲ್ಲರಲ್ಲಿ ಈ ನಮ್ಮ ಚರಿತ್ರನಾಯಕರು ಪ್ರಾಮುಖ್ಯತ್ವೇನ ಎಣಿಸಲ್ಪಡುವರೆಂಬದು ಅವರ ಚರಿತ್ರವನ್ನೋದಿದ ಪ್ರತಿಯೊಬ್ಬನಿಗೆ ಗೊತ್ತಾಗದೆ ಇರದು! ಪಾಪಮಯವಾದ ಈ ಕಲಿಯುಗದಲ್ಲಿ ಮನುಷ್ಯಪ್ರಾಣಿಯು ವಿವಿಧಕಷ್ಟಗಳಿಗೆ ಗುರಿಯಾಗುತ್ತಿರುವದನ್ನು ನೋಡಿ ವ್ಯಸನಪಟ್ಟು ಮಾನವೀಪ್ರಾಣಿಯ ಉದ್ಧಾರಕ್ಕಾಗಿ ದೇವತೆಗಳೇ ಸತ್ಪುರುಷರ ರೂಪದಿಂದ ಭೂಮಿಗೆ ಬರುತ್ತಿರುವರೆಂಬದು ಈ ಚರಿತ್ರಾವಲೋಕನದಿಂದ ಸಹಜವಾಗಿ ಕಂಡು ಬರುತ್ತದೆ; ಒಟ್ಟಿಗೆ ಸತ್ಪುರುಷರೆಲ್ಲರೂ ದೈವೀಬಲಸಂಪನ್ನರಾದ್ದರಿಂದ ಶುಭೇಚ್ಛುಗಳಾದವರು ಅವರ ಪ್ರತ್ಯಕ್ಷ ದರ್ಶನವನ್ನು ಹೊಂದಿಯಾಗಲಿ, ಇಲ್ಲವೆ ಅವರ ಪ್ರತ್ಯಕ್ಷ ದರ್ಶನಕ್ಕೆ ಮಾರ್ಗವಿಲ್ಲದಲ್ಲಿ ಅವರ ಮಂಗಲಚರಿತ್ರವನ್ನು ಶ್ರವಣ ಮಾಡಿಯಾಗಲಿ ತಮ್ಮ ಆತ್ಮೋನ್ನತಿಯನ್ನು ಮಾಡಿಕೊಳ್ಳತಕ್ಕದ್ದು.

ಜಗಚ್ಚಾಲಕನಾದ ಮಹಾವಿಷ್ಣುವಿನ ದಶಾವತಾರಗಳಲ್ಲಿ ಪ್ರಕೃತದಲ್ಲಿ ಬೌದ್ಧಾವತಾರವು ನಡೆಯುತ್ತಿರುವದಷ್ಟೇ; 'ಬುದ್ಧ' ಅಂದರೆ ಜ್ಞಾನಿಯೆಂಬರ್ಥ ವಾಗುತ್ತಿರುವದರಿಂದ ಈಗಿನ ಕಾಲವು ಜ್ಞಾನಿಗಳ ಅವತಾರದ ಕಾಲವೆಂತಲೇ ಹೇಳಬಹುದು. ಹೀಗೆ ಜ್ಞಾನಿಗಳ ರೂಪದಿಂದ ಅವತರಿಸಿ ಧರ್ಮವನ್ನು ಸಂರಕ್ಷಿಸುವ ಪರಮಾತ್ಮನು ಧನುಷ್ಪಾಣಿಯಾಗಿ ಈಗ ರಾಕ್ಷಸರೊಡನೆ ಹೋರಾಡುವ ಹಾಗಿಲ್ಲ. ಕಲಿಯುಗದಲ್ಲಿ ರಾಕ್ಷಸರು ತಮ್ಮ ಅಕರಾಳ ವಿಕರಾಳ ರೂಪವನ್ನು ಉಪಸಂಹರಿಸಿಕೊಂಡು, ಮಾನವೀಪ್ರಾಣಿಯಲ್ಲಿ ವಾಸಿಸುವ ಕಾಮ-ಕ್ರೋಧಾದಿ ಷಡ್ವಿಕಾರಗಳಲ್ಲಿ ಕ್ರಮದಿಂದ ವ್ಯಾಪಿಸಿ ಮನುಷ್ಯನನ್ನು ನುಗ್ಗುಮಾಡುತ್ತಿರುವರು. ಹೀಗೆ ರಾಕ್ಷಸರು ಮನುಷ್ಯಪ್ರಾಣಿಯ ಮನೋಮಯರಾಗಿ ಕುಳಿತುಕೊಳ್ಳಲು ಅವರನ್ನು ಸಂಹರಿಸಲಿಕ್ಕೆ ವಾಗ್‌ರೂಪೀಶಸ್ತ್ರವನ್ನು ಸತ್ಪುರುಷರೂಪೀ ಪರಮಾತ್ಮನು ಧರಿಸಬೇಕಾಯಿತು. ಅಂತೇ ರಾಕ್ಷಸರಿಂದ ಗ್ರಸ್ತರಾದ ನಾವು ಓಡಿ ಓಡಿ ಹೋಗುತ್ತಿರಲು, ಸತ್ಪುರುಷರು ನಮ್ಮನ್ನು ಹಿಡಿಹಿಡಿದು ಜಗ್ಗಿ ಜಗ್ಗಿ ನಮಗೆ ಬೋಧಮಾಡಿ ನಮ್ಮನ್ನು ರಾಕ್ಷಸರಬಾಧೆಯಿಂದ ಮುಕ್ತರನ್ನಾಗಮಾಡುತ್ತಿರುವರು. ನಮ್ಮ ಅಗಡಿಯ ಶ್ರೀಶೇಷಾಚಲಸದ್ಗುರುಗಳವರನ್ನು ನೋಡಿದವರಿಗೂ ಅವರ ಬೋಧವನ್ನು ಕೇಳಿದವರಿಗೂ ನಮ್ಮ ಈ ಬರಹದ ಸತ್ಯತೆಯು ತೋರದೆ ಇರದು!

ಒಟ್ಟಿನ ಮೇಲೆ ಹೇಳತಕ್ಕದ್ದೇನಂದರೆ—ಸತ್ಪುರುಷರು ನಮ್ಮ ಸಲುವಾಗಿಯೇ ಹುಟ್ಟಿ, ನಮ್ಮ ಸಲುವಾಗಿಯೇ ಕಷ್ಟಪಡತ್ತಿರುವದರಿಂದ ಅವರ ಉಪಕಾರವನ್ನು ನಾವು ಎಷ್ಟು ಜನ್ಮವೆತ್ತಿ ತೀರಿಸಿದರೂ ತೀರದು! ಆ ಮಹಾತ್ಮರು ಮಾಡಿದ ಸುಲಭ ಬೋಧವು ನಮಗೆ ತಾರಕವೂ, ಅವರ ಆಚರಣೆಯು ನಮಗೆ ಮಾರ್ಗದರ್ಶಕವೂ ಆಗಿರುವದರಿಂದ ಅವರ ಚರಿತ್ರವನ್ನು ನಾವು ಪ್ರತಿಯೊಬ್ಬರೂ ಓದಿಯೇ ತೀರಬೇಕು; ಈ ನಮ್ಮ ಪ್ರಸ್ತುತದ ಚರಿತ್ರನಾಯಕರಿಂದ ನಾವು ಹಲವು ಬಗೆಯ ಗುಣಗಳನ್ನುಗ್ರಹಿಸಿ ಸುಖಹೊಂದಬಹುದಾಗಿದೆ. ಮಡಿವಾಳಪ್ಪನವರಲ್ಲಿದ್ದ ನಿಷ್ಕಪಟವೃತ್ತಿ, ಸರಳತನ, ಭೂತವಾತ್ಸಲ್ಯ, ನ್ಯಾಯನಿಷ್ಠುರ್ಯಾದಿ ಸದ್ಗುಣಗಳು ಅಂಶರೂಪದಿಂದಾದರೂ ಪ್ರಾಪ್ತವಾದರೆ ಅದಾವನ ಕಲ್ಯಾಣವಾಗಲಿಕ್ಕಿಲ್ಲ! ಇಂಥ ಉತ್ತಮೋತ್ತಮ ಸದ್ಗುಣ ರತ್ನಗಳು ಈ ಚರಿತ್ರದಲ್ಲಿ ಹೇರಳವಾಗಿ ಸಿಗಬಹುದಾದ್ದರಿಂದ ಇದನ್ನು ಓದಿ ಸದ್ಗುಣಸಂಪನ್ನನಾಗುವ ಭಾವಿಕನ ಮೇಲೆ ಶ್ರೀ ಮಡಿವಾಳಪ್ಪನವರು ತಮ್ಮ ಕೃಪಾವೃಷ್ಟಿಯನ್ನು ಸುರಿಸದೆ ಬಿಡರೆಂದು ನಾವು ನಿಶ್ಚಯದಿಂದ ಹೇಳುವೆವು.

—ಸಂಪೂರ್ಣ.—